# ಕನ್ನಡ



# ವಾಚನಮಾಲೆ

## ಮೂರನೆಯ ಪುಸ್ತಕ

**Reprint — 1954**

ಮುಂಬಯಿ ಪ್ರಾಂತದ ವಿದ್ಯಾಖಾತೆಯಿಂದ ಪ್ರಕಟಿತವಾದುದು.

ಬೆಲೆ: ೧೦ ಆಣೆ



# ಅರಿಕೆ

ನಮ್ಮ ಶಾಲೆಯಲ್ಲಿ ಉಪಯೋಗಿಸುವ ಪಠ್ಯಪುಸ್ತಕಗಳು ಯಾವ ತತ್ವವನ್ನವಲಂಬಿಸಿರಬೇಕೆಂಬುದನ್ನು ನಿರ್ಧರಿಸಲು ಮುಂಬಯಿ ಸರಕಾರದವರು ೧೯೪೭ರಲ್ಲಿ ಒಂದು ಸಮಿತಿಯನ್ನು ನಿರ್ಮಿಸಿದರು. ಆ ಸಮಿತಿಯವರು ಪಠ್ಯಪುಸ್ತಕಗಳನ್ನು ಹೇಗೆ ರಚಿಸಬೇಕೆಂಬ ಬಗ್ಗೆ ಹಲವು ತತ್ವಗಳನ್ನು ಗೊತ್ತುಪಡಿಸಿದರು. ಆ ತತ್ವಗಳಿಗನುಸರಿಸಿ ಕನ್ನಡ ಪ್ರಾಥಮಿಕ ಶಾಲೆಗಳ ೧-೪ ಇಯತ್ತೆಗಳಿಗಾಗಿ ಕ್ರಮಿಕ ವಾಚನಮಾಲೆಯನ್ನು ರಚಿಸಲು ಸರಕಾರದವರು ಕೆಳಗೆ ಕಾಣಿಸಿದ ಸದಸ್ಯರ ಸಮಿತಿಯನ್ನು ಏರ್ಪಡಿಸಿರುವರು.

೧. ಡಾ। ಶಿ. ಶಿ. ನಂದೀಮಠ, ಎಮ್. ಎ., ಪಿಎಚ್. ಡಿ. (ಅಧ್ಯಕ್ಷ)
೨. ಪಂಡಿತ ಮ. ಪ್ರ. ಪೂಜಾರ,
೩. ಪ್ರೊ। ಸ. ಸ. ಮಾಳವಾಡ, ಎಮ್. ಎ.,
೪. ಶ್ರೀ ರಾ. ವಿ. ದೇಸಾಯಿ, ಬಿ. ಎ., ಬಿ. ಟಿ.,
೫. ಶ್ರೀ ಮ. ಗು. ಹಂಗ್ರಾಳ, ಬಿ. ಎ., (ಆನರ್ಸ) ಬಿ. ಟಿ. (ಕಾರ್ಯದರ್ಶಿ)

ಈ ಸಮಿತಿಯವರು ರಚಿಸಿದ ವಾಚನಮಾಲೆಯಲ್ಲಿ ಈ ಪುಸ್ತಕವು ನಾಲ್ಕನೆಯದು

ಈ ಮಹನೀಯರು ಯಾವ ಪ್ರತಿಫಲವನ್ನೂ ಪಡೆಯದೆ ಉತ್ಸಾಹದಿಂದ ಕ್ರಮಿಕ ವಾಚನಮಾಲೆಯ ಕಾರ್ಯವನ್ನು ಕೈಕೊಂಡದ್ದಕ್ಕಾಗಿ ವಿದ್ಯಾಖಾತೆಯವರು ಅವರಿಗೆ ಋಣಿಯಾಗಿದ್ದಾರೆ.

ಪುಣೆ,
ದಿನಾಂಕ: ೨೦-೧೨-'೪೯

ಡಾ. ಚಿಂ. ಪಾವಟೆ,
ಮುಂಬಯಿ ಪ್ರಾಂತದ ಮುಖ್ಯ ವಿದ್ಯಾಧಿಕಾರಿ.

# ಸೂಚನೆ

ಮುಂಬಯಿ ಸರಕಾರದವರು ೧೯೩೯ರಲ್ಲಿ ಈಗ ಡೈರೆಕ್ಟರರಾಗಿರುವ ಶ್ರೀ. ಡಾ ಜಿಂಪಾವಟಿಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿರ್ಮಿಸಿದ್ದರು. ಅವರು ಪಠ್ಯಪುಸ್ತಕಗಳನ್ನು ಹೇಗೆ ರಚಿಸಬೇಕೆಂಬ ಬಗ್ಗೆ ಕೆಲವು ತತ್ವಗಳನ್ನು ಗೊತ್ತುಪಡಿಸಿರುವರು ಅವುಗಳಲ್ಲಿ ಕೆಳಗಿನವು ಮುಖ್ಯವಾದವುಗಳು:

೧ ಪಾಠಗಳು ಮಕ್ಕಳ ವಯಸ್ಸಿಗೂ ಅವರ ಬುದ್ಧಿವಿಕಾಸದ ಮಟ್ಟಕ್ಕೂ ಅನುಸರಿಸಿ ಇರಬೇಕು.

೨ ಭಾಷೆ, ಶೈಲಿ, ವಿಷಯ ಇವು ಮಕ್ಕಳ ಶಬ್ದಸಂಗ್ರಹ ಮತ್ತು ಗ್ರಹಣಶಕ್ತಿ ಇವುಗಳಿಗೆ ನಿಲುಕುವಂತಿರಬೇಕು.

೩. ಪಾಠಗಳು ವಿಷಯ ಪ್ರಧಾನವಾಗಿರದೆ ಸಾಹಿತ್ಯ ದೃಷ್ಟಿಯಿಂದ ಮಕ್ಕಳ ಮನಸ್ಸನ್ನು ಸೆಳೆಯುವಂಥವಿರಬೇಕು.

೪. ಪಾಠಗಳು ಮಕ್ಕಳ ಜ್ಞಾನ, ಅಭಿರುಚಿ, ಶಬ್ದಸಂಗ್ರಹ ಇವನ್ನು ಕ್ರಮವಾಗಿ ವಿಕಾಸಗೊಳಿಸುವಂಥವಿರಬೇಕು.

೫ ಪಾಠಗಳು ನಮ್ಮ ರೀತಿ, ನೀತಿ, ರಾಷ್ಟ್ರದ ಸಂಸ್ಕೃತಿ ಇವುಗಳಿಗೆ ಪೋಷಕವಾಗುವಂಥವಿರಬೇಕು.

ಮೂರನೆಯ ಪುಸ್ತಕದಲ್ಲಿ ಮಕ್ಕಳಿಗೆ ಓದುವ ಅಭಿರುಚಿಯುಂಟಾಗುವಂತೆ ಪಾಠಗಳನ್ನು ಸಂಗ್ರಹಿಸಲಾಗಿದೆ. ಮೂಲಶಿಕ್ಷಣ ತತ್ವಗಳಿಗೆ ಅನುಗುಣವಾಗುವಂತೆ ಕೆಲವು ಪಾಠಗಳನ್ನು ಜೋಡಿಸಲಾಗಿದೆ. ಅವು ಪ್ರಾಮುಖ್ಯವಾಗಿ ಕೃತಿಪ್ರಧಾನವಾಗಿವೆ. ಮಕ್ಕಳ ಪ್ರತಿದಿವಸದ ಚಟುವಟಿಕೆ, ಪ್ರಕೃತಿ ನಿರೀಕ್ಷಣೆ, ಉಪಯುಕ್ತ ವಿಷಯ ಮೊದಲಾದವುಗಳನ್ನು ಗಮನಿಸಿ ಪಾಠಗಳನ್ನು ರಚಿಸಲಾಗಿದೆ. ಕೃತಿಪ್ರಧಾನವಾದ ಪಾಠಗಳನ್ನು ಕಲಿಸುವ ಮುಂಚೆ ಶಿಕ್ಷಕರು ಮಕ್ಕಳ ಕಡೆಯಿಂದ ಅವಶ್ಯಕ ಕೃತಿಗಳನ್ನು ಮಾಡಿಸಬೇಕು,

ಅಭ್ಯಸನಗಳು ವಿವಿಧವಾಗಿದ್ದು ಮಕ್ಕಳ ಬುದ್ಧಿವಿಕಾಸವನ್ನು ಪರೀಕ್ಷಿಸುವಂತಹವೂ ಮಕ್ಕಳ ಸಾಮಾನ್ಯ ಜ್ಞಾನವನ್ನು ಬೆಳೆಯಿಸುವಂತಹವೂ ಅವೆ. ಶಿಕ್ಷಕರು ಇದೇ ಮಾದರಿಯ ಹೆಚ್ಚು ಉದಾಹರಣೆಗಳನ್ನು ಕೊಟ್ಟು ಮಕ್ಕಳಿಗೆ ಅವುಗಳನ್ನು ಮನನ ಮಾಡಿಸಬೇಕು.

ಶಿ. ಚೆ. ನಂದೀಮಠ,
ಅಧ್ಯಕ್ಷ, ಕನ್ನಡ ಪಠ್ಯಪುಸ್ತಕ ರಚನಾಸಮಿತಿ,
ಧಾರವಾಡ

# ಪರಿವಿಡಿ

# ೧. ಗಣಪತಿಯ ಕಥೆ




ಅಂದು ಗಣಪತಿಯ ಹಬ್ಬ. ಹುಡುಗರೆಲ್ಲರಿಗೆ ಹಿಗ್ಗು. ಸಾಲೆಯ ಹುಡುಗರೆಲ್ಲರು ಕೂಡಿ ಸಾಲೆಯನ್ನು ಸಿಂಗರಿಸಿದರು. ಸಾಲೆಯ ಗಣಪತಿಯನ್ನು ಮೆರವಣಿಗೆಯಿಂದ ತಂದರು. ಅಲಂಕರಿಸಿದ ಮಂಟಪದಲ್ಲಿ ಇಟ್ಟರು; ಗಣಪತಿಯನ್ನು ಪೂಜಿಸಿ ಆರತಿಪದಗಳನ್ನು ಹೇಳುತ್ತ ಮಂಗಳಾರತಿ ಮಾಡಿದರು. ಗುರುಗಳು ಅವರೆಲ್ಲರಿಗೆ ಗಣಪತಿಯ ಕಥೆಯನ್ನು ಹೇಳಲಾರಂಭಿಸಿದರು:-

"ಗಣಪತಿಯು ಶಿವ ಪಾರ್ವತಿ ಇವರ ಮಗನು. ಷಣ್ಮುಖನು ಅವನ ಅಣ್ಣ. ಅವನಿಗೆ ಕುಮಾರ ಎಂದೂ ಹೆಸರು. ಗಣಪತಿಯ ವಾಹನ ಇಲಿ. ಕುಮಾರನ ವಾಹನ ನವಿಲು. ಗಣಪತಿ ಬಲು ತುಂಟ; ಆದರೆ ಬಲು ಬುದ್ಧಿವಂತ.ಅವನ ವಾಹನವಾದ ಇಲಿಯೂ ಕಿಡಿಗೇಡಿ.ಒಂದು ದಿನ ಇಲಿ ಮೆಲ್ಲನೆ ನವಿಲ ಹಿಂದೆ ಹೋಗಿ, ಒಂದು ಗರಿಯನ್ನು ಎಳೆಯಿತು; ಸರ್ರನೆ ಗುದ್ದಿನೊಳಗೆ ಸೇರಿಕೊಂಡಿತು, ಅಂದು ಇಲಿ ಹೊರಗೆ ಬರಲೇ ಇಲ್ಲ.

ಕುಮಾರನಿಗೆ ಕೋಪ ಬಂದಿತು. ನವಿಲಿನ ನೋವನ್ನು ಕಂಡು ಕಳವಳಿಸಿ ಗಣಪತಿಯು ಹತ್ತಿರ ಬಂದನು. 'ನೋಡಿದೆಯಾ ನಿನ್ನ ಇಲಿಯ ಕಿಡಿಗೇಡಿತನವನ್ನು!' ಎಂದು ಗದ್ದರಿಸಿದನು. 'ಅಣ್ಣಾ, ಅದಕ್ಕೆ ಬುದ್ಧಿ ಇದ್ದರೆ ಹೀಗೇಕೆ ಮಾಡುತ್ತಿತ್ತು? ಹೋಗಲಿ ಬಿಡು' ಎಂದು ಗಣಪತಿಯು ಸಮಾಧಾನ ಹೇಳಿದನು; ಆದರೆ ಕುಮಾರನ ಸಿಟ್ಟು ಇಳಿಯಲಿಲ್ಲ. ಮಾತಿಗೆ ಮಾತು ಬೆಳೆದವು. ಕಡೆಗೆ 'ನಾ ಹೆಚ್ಚು, ನಾ ಹೆಚ್ಚು' ಎಂದು ಇಬ್ಬರೂ ವಾದಹಾಕಿದರು.

ಮಕ್ಕಳ ಜಗಳವನ್ನು ಕೇಳಿ ಶಿವ ಪಾರ್ವತಿಯರು ಅಲ್ಲಿಗೆ ಬಂದರು. ಯಾರು ಹೆಚ್ಚಿನವರೆಂದು ಹೇಳುವದು ಅವರಿಗೆ ಕಷ್ಟವೆನಿಸಿತು. 'ನೀವಿಬ್ಬರೂ ಹೆಚ್ಚಿನವರೇ ಎಂದು ಹೇಳಿದರು. ಜಗಳ ತೀರಲಿಲ್ಲ. 'ಯಾರು ಭೂಪ್ರದಕ್ಷಿಣೆ ಮಾಡಿಕೊಂಡು ಮೊದಲು ಬರುವರೋ ಅವರೇ ಹೆಚ್ಚಿನವರು' ಎಂದು ಶಿವನು ಹೇಳಿದನು.

ಇಷ್ಟು ಹೇಳುವದೊಂದೇ ತಡ. ಕುಮಾರನು ಅಲ್ಲಿ ನಿಲ್ಲಲೇ ಇಲ್ಲ. ತನ್ನ ನವಿಲನ್ನೇರಿ ಭೂಪ್ರದಕ್ಷಿಣೆಗೆ ಹೊರಟೇ ಬಿಟ್ಟನು. ತಾನೇ ಗೆಲ್ಲುವದು ನಿಜವೆಂದು ಹೆಮ್ಮೆಪಟ್ಟನು.

ಇತ್ತ ಗಣಪತಿಯು ಹೊರಗೆ ಹೊರಡಲೇ ಇಲ್ಲ. ಅಲ್ಲಿಯೇ ತಂದೆ ತಾಯಿಗಳ ಹತ್ತಿರ ನಿಂತುಬಿಟ್ಟನು. ತಂದೆ ತಾಯಿಗಳಿಗೂ ಆಶ್ಚರ್ಯವಾಯಿತು. 'ಗಣಪತಿಯು ಇಲ್ಲಿಯೇ ಇರುವನಲ್ಲ!' ಎಂದು ಅವರು ಅಂದರು.

ಕುಮಾರನು ಮರಳಿ ಬರುವ ಹೊತ್ತಾಯಿತು. ಗಣಪತಿಗೆ ಇದು ತಿಳಿಯಿತು. ಕೂಡಲೆ ಎದ್ದು ತಾಯಿ-ತಂದೆಗಳಿಗೆ ಒಂದು ಪ್ರದಕ್ಷಿಣೆ ಹಾಕಿ ಅವರಿಗೆ ನಮಸ್ಕಾರ ಮಾಡಿದನು; ಅಲ್ಲಿಯೇ ನಿಂತುಬಿಟ್ಟನು. ಬಳಿಕ ಕುಮಾರನು ಭೂಪ್ರದಕ್ಷಿಣೆಯನ್ನು ಮುಗಿಸಿ ಅಲ್ಲಿಗೆ ಬಂದನು.

ಯಾರು ಗೆದ್ದವರು ತಿಳಿಯಿತೇ? 'ನಾನು ಗೆದ್ದವನು' ಎಂದು ಗಣಪತಿಯು ಅಂದನು. ಮತ್ತೆ ಜಗಳಕ್ಕೆ ಆರಂಭವಾಯಿತು. ತಂದೆ ತಾಯಿಗಳು ನಕ್ಕರು. 'ಗಣಪಾ, ನೀನು ಇಲ್ಲಿಯೇ ನಿಂತಿರುವೆ;

ಹೊರಗೆ ಹೋಗಲೇ ಇಲ್ಲ. ಭೂಪ್ರದಕ್ಷಿಣೆಯನ್ನು ಹೇಗೆ ಹಾಕಿದೆ!' ಎಂದು ಪಾರ್ವತಿ ಕೇಳಿದಳು.

ಗಣಪತಿಯು ನಕ್ಕು- 'ಹೌದು, ನಾನು ಹೊರಗೆ ಹೋಗಲೇ ಇಲ್ಲ; ನಿಮ್ಮ ಪ್ರದಕ್ಷಿಣೆ ಹಾಕಿದೆನು; ನಿಮ್ಮ ಹೊಟ್ಟೆಯಲ್ಲಿ ಭೂಮಂಡಲವು ಅಡಗಿದೆ; ನಾನೇ ಭೂಪ್ರದಕ್ಷಿಣೆಯನ್ನು ಮೊದಲು ಮಾಡಿದಂತಾಯಿತು; ಅದರಿಂದ ನಾನೇ ಹೆಚ್ಚಿನವನು' ಎಂದು ಗಣಪತಿಯು ಉತ್ತರ ಕೊಟ್ಟನು. 'ಹೀಗೋ!' ಎಂದು ಪಾರ್ವತೀ ಪರಮೇಶ್ವರರು ಗಣಪತಿಯ ಮಾತಿಗೆ ಮೆಚ್ಚಿದರು. ಆತನ ಬುದ್ಧಿಗೆ ತಲೆದೂಗಿದರು.

'ನೋಡು! ಕುಮಾರ! ನೀನು ಶೂರತನದಲ್ಲಿ ಹೆಚ್ಚಿನವನು; ನಿನ್ನ ತಮ್ಮ ಬುದ್ಧಿಯಲ್ಲಿ ಬಹಳ ಹೆಚ್ಚಿನವನು; ಸುಮ್ಮನೆ ಜಗಳಾಡ ಬೇಡಿರಿ' ಎಂದು ಶಿವ ಪಾರ್ವತಿಯರು ಕುಮಾರನಿಗೆ ಸಮಾಧಾನ ಹೇಳಿದರು.

ಮಕ್ಕಳೇ, ಗಣಪತಿಯು ಬಲು ಬುದ್ಧಿವಂತ ಎಂಬದು ನಿಮಗೆ ತಿಳಿಯಿತಲ್ಲವೆ? ಗಣಪತಿಯು ಹೇಗೆ ಯುಕ್ತಿಯಿಂದ ಈ ಮೇಲಾಟ ದಲ್ಲಿ ಗೆದ್ದನೆಂಬದು ಗೊತ್ತಾಯಿತೇ?

ಯಾವದಾದರೊಂದು ತೊಡಕಿನ ಪ್ರಸಂಗದಲ್ಲಿ ನಾವು ಗಣೇಶನನ್ನು ನೆನೆಯುತ್ತೇವೆ. ಹೊಸ ಕೆಲಸವನ್ನು ಆರಂಭಮಾಡುವ ಮುಂಚೆ ನಾವು 'ಶ್ರೀ ಗಣೇಶಾಯ ನಮಃ' ಎಂದು ಆತನನ್ನು ನಮಿಸುತ್ತೇವೆ. ವಿಘ್ನ ಬಂದಾಗ ಅವನು ನಮ್ಮನ್ನು ವಿಘ್ನಗಳಿಂದ ದೂರಮಾಡುವನು; ಅದರಿಂದ ಗಣೇಶನನ್ನು 'ವಿಘ್ನೇಶ್ವರ' ಎಂದು ಕರೆಯುವರು.

ಹೀಗೆ ಗುರುಗಳು ಗಣಪತಿಯ ಕಥೆಯನ್ನು ಹೇಳಿದರು. 'ಶ್ರೀ ಗಣೇಶಾಯ ನಮಃ' ಎಂದು ಎಲ್ಲರೂ ಒಂದೇ ದನಿಯಿಂದ ಕೂಗಿ ನಮಿಸಿದರು; ತಮ್ಮ ತಮ್ಮ ಮನೆಗಳಿಗೆ ತೆರಳಿದರು.

**ಅಭ್ಯಸನಗಳು:—**

೧. ಗಣಪತಿಯ ಹಬ್ಬದ ದಿನ ಶಾಲೆಯ ಹುಡುಗರು ಯಾವ ಯಾವ ಕೆಲಸಗಳನ್ನು ಮಾಡಿದರು?

೨. ಗಣಪತಿಯೂ, ಕುಮಾರನೂ ಯಾಕೆ ಜಗಳಾಡಹತ್ತಿದರು?
೩. ಯಾರು ಹೆಚ್ಚಿನವರೆಂದು ಗೊತ್ತಾಯಿತು?
೪. ಗಣಪತಿಯನ್ನು ವಿಘ್ನೇಶ್ವರ ಎಂದು ಯಾಕೆ ಕರೆಯುವರು?

# ೨. ನಮ್ಮ ನಾಡು

ನಮ್ಮ ತಾಯಿ ಕನ್ನಡ; ನಮ್ಮ ರಕ್ತ ಕನ್ನಡ ।
ನಮ್ಮ ಪ್ರಾಣ ಕನ್ನಡ; ನಮ್ಮ ನುಡಿಯು ಕನ್ನಡ ।
ನಮ್ಮ ನಾಡು ಕನ್ನಡ
ಚಾಲುಕ್ಯ ರಾಷ್ಟ್ರಕೂಟ ವಿಜಯನಗರ ರಾಜರ ।
ಕಾಳಗದೊಳು ಕೆಚ್ಚಿನಿಂದ ಕಾದಿದಂಥ ವೀರರ ।
ವೀರಮಾತೆ ಕನ್ನಡ ॥ ೧ ॥
ಪಂಪ ರನ್ನ ಹರಿಹರಾರ್ಯ ರಾಘವಾಂಕ ಕವಿಗಳ ।
ಸೋಮ ಭೀಮ ಚಾಮ ಕುವರವ್ಯಾಸ ಲಕ್ಷ್ಮೀಶರ ।
ಕಾವ್ಯವಾಣಿ ಕನ್ನಡ ॥ ೨ ॥
ಬಸವ ಚೆನ್ನಬಸವ ಅಲ್ಲಮಾದಿ ಶಿವನ ಶರಣರ ।
ರಸದ ಭಕ್ತಿಗೀತೆಗಳನು ಹಾಡಿದಂಥ ದಾಸರ ।
ಪುಣ್ಯಭೂಮಿ ಕನ್ನಡ ॥ ೩ ॥
ಮುತ್ತುರತ್ನಗಳನು ಬಳ್ಳದಿಂದ ಅಳೆದು ಮಾರಿದ ।
ದತ್ತಿ ದಾನ ಧರ್ಮಗಳಿಗೆ ತಮ್ಮ ಧನವ ತೂರಿದ ।
ವಣಿಜ ನಾಡು ಕನ್ನಡ ॥ ೪ ॥
ಅಳಿದು ಹೋದ ಕಲೆಗಳಿಂದು ಮತ್ತೆ ಬಾಳಿ ಬೆಳೆಯಲಿ ।
ಬಳಲಿ ಬೆಂದ ಜನತೆಯಲ್ಲಿ ಸೌಖ್ಯ ಶಾಂತಿ ಹೆಚ್ಚಲಿ ।
ನಾಡಿನೇಳ್ಗೆಯಾಗಲಿ ॥ ೫ ॥
ಕಳೆದು ಹೋದ ನಾಡನುಡಿಯ ಸೀಮೆ ಮತ್ತೆ ಕೂಡಲಿ ।
ಅಳಿಯದಂಥ ಸ್ವಾಭಿಮಾನ ನಮ್ಮ ಎದೆಯೊಳಾಡಲಿ ।
ಎಗ್ಗತನವು ಓಡಲಿ ॥ ೬ ॥

ನಾವು ಒಂದೆ ತಾಯ ಬಸಿರಿನಿಂದ ಬಂದ ಮಕ್ಕಳು।
ನಾವು ಅಣ್ಣತಮ್ಮರೆಂಬ ಭಾವ ಬೆಳೆಯಲಿಮ್ಮೊಳು।
ತೆರೆಯಲೆಮ್ಮ ಕಂಗಳು ॥ ೭ ॥

**ಅಭ್ಯಸನಗಳು:—**

೧. ಈ ನಾಡಿನಲ್ಲಿ ಯಾವ ಯಾವ ಅರಸರು ಆಳಿದರು?
೨. ಶ್ರೇಷ್ಠ ಕನ್ನಡ ಕವಿಗಳು ಯಾರು ಯಾರು ಇದ್ದರು?
೩. ಭಕ್ತಿಪದಗಳನ್ನು ಯಾರು ಹಾಡಿದರು?
೪. ಈ ಕವಿತೆಯಲ್ಲಿ ಏನೇನು ಆಗಬೇಕೆಂದು ಹೇಳಿದೆ?
೫. ಕೆಳಗಿನ ಶಬ್ದಗಳ ಅರ್ಥ ಹೇಳಿರಿ:
ಕವೀಂದ್ರ, ಪುಣ್ಯಭೂಮಿ, ವಣಿಜನಾಡು, ವೀರಮಾತೆ, ಅರ್ಥದೇಳ್ಗೆ, ಕಂಗಳು, ಎಗ್ಗತನ

## ೩. ಕಸ್ತೂರಬಾ

'ಕಸ್ತೂರ ಬಾ' ಅವರು ಗಾಂಧಿಜಿಯವರ ಹೆಂಡತಿ. ಇಬ್ಬರೂ ಕೆಲವು ವರುಷಗಳ ಹಿಂದೆ ತಮ್ಮ ಸಾಬರಮತಿಯ ಆಶ್ರಮದಲ್ಲಿ ಇರುತ್ತಿದ್ದರು. ಅವರು ಆಶ್ರಮದಲ್ಲಿದ್ದವರನ್ನೆಲ್ಲ ಹೊಟ್ಟೆಯ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು. ಆದಕಾರಣ ಆಶ್ರಮವಾಸಿಗಳೆಲ್ಲರೂ ಗಾಂಧಿಜಿಗೆ 'ಬಾಪೂ' ಎಂತಲೂ 'ಕಸ್ತೂರ ಬಾ' ಅವರಿಗೆ 'ಬಾ' ಎಂತಲೂ ಕರೆಯುತ್ತಿದ್ದರು. ಗುಜರಾಥಿಯಲ್ಲಿ 'ಬಾಪು' ಎಂದರೆ ತಂದೆ, 'ಬಾ' ಎಂದರೆ ತಾಯಿ ಎಂದು ಅರ್ಥ.

ಒಂದು ದಿವಸ 'ಕಸ್ತೂರ ಬಾ' ಅವರು ಮಧ್ಯಾಹ್ನದ ಊಟವಾದ ಬಳಿಕ ಕೋಣೆಯಲ್ಲಿ ಸ್ವಲ್ಪ ಹೊತ್ತು ಅಡ್ಡಾಗಿದ್ದರು. ಆಗ ಅಡಿಗೆಯ ಮನೆಯಲ್ಲಿ 'ಜಣ್ ಜಣ್' ಎಂದು ಸಪ್ಪಳವಾಯಿತು. ಆ ಸಪ್ಪಳವನ್ನು ಕೇಳಿ, ಬೆಕ್ಕು ತಾಟನ್ನು ಉರುಳಿಸಿರಬೇಕೆಂದು ಲಗುಬಗೆಯಿಂದ 'ಕಸ್ತೂರಬಾ' ಅವರು ಅಡಿಗೆಯ ಮನೆಗೆ ಹೋದರು. ಅಲ್ಲಿ ಬೆಕ್ಕು ಇರಲಿಲ್ಲ; ಆದರೆ ಆಶ್ರಮದೊಳಗಿನವರಿಬ್ಬರು ಅಡಿಗೆಮಾಡುವದಕ್ಕೆ



ತೊಡಗಿದ್ದರು. ಒಬ್ಬನ ಕೈಯಿಂದ ತಾಟು ಜಾರಿ ಕೆಳಗೆ ಬಿದ್ದಿತ್ತು. ಇದನ್ನೆಲ್ಲ ಕಂಡು 'ಬಾ' ಅವರಿಗೆ ಸೋಜಿಗವಾಯಿತಲ್ಲದೆ, ಸ್ವಲ್ಪ ಸಿಟ್ಟೂ ಬಂದಿತು; ಏಕೆಂದರೆ, ಅಡಿಗೆ ಮನೆಯ ಕೆಲಸಗಳನ್ನೆಲ್ಲ 'ಬಾ' ಅವರೇ ಮಾಡುತ್ತಿದ್ದರು. ಅದರಿಂದ ಅವರು – "ಏನು ನಡೆಸಿರುವಿರಿ?" ಎಂದು ಕೇಳಿದರು. ಆಗ ಒಬ್ಬನು – "ಪಂಡಿತ ಮೋತಿಲಾಲ ಮೊದಲಾದ ನಾಡಿನ ಹಿರಿಯರು ಬಂದಿರುವರು; ಅವರೆಲ್ಲರು ಊಟಕ್ಕೆ ಬರುವವರಂತೆ" ಎಂದು ಹೇಳಿದನು. "ಹಾಗಿದ್ದರೆ ನನ್ನನ್ನು ಕರೆಯಬೇಕಾಗಿತ್ತು" ಎಂದು 'ಕಸ್ತೂರ ಬಾ' ಅವರು ಅಂದರು. ಅವರಲ್ಲಿ ಇನ್ನೊಬ್ಬನು– "ಎಲ್ಲವನ್ನು ಸಿದ್ಧಗೊಳಿಸಿ ತಮ್ಮನ್ನು ಕರೆಯಬೇಕೆಂದು ಮಾಡಿದ್ದೆವು" ಎಂದನು. "ನನ್ನಂತೆ ನೀವೂ ದಣಿದಿರುವಿರಿ; ನನ್ನನ್ನೂ ಎಬ್ಬಿಸಬೇಕಾಗಿತ್ತು" ಎಂದು 'ಬಾ' ಅವರು ಅಂದರು. ಬಳಿಕ ಎಲ್ಲ ಅಡಿಗೆಯನ್ನು ತಾವೇ ಮಾಡಿದರು. ಬಂದ ಜನರಿಗೆ ಊಟ ಮಾಡಿಸಿದರು.

ಆಶ್ರಮದೊಳಗಿನವರಿಗೆ ಅಡಿಗೆ ಮಾಡಲು ಹೇಳಿದವರು ಗಾಂಧಿಜಿ ಎಂಬದು 'ಕಸ್ತೂರ ಬಾ' ಅವರಿಗೆ ಗೊತ್ತಾಯಿತು. ಗಾಂಧಿಜಿಯು ಸಂಜೆಯ ಪ್ರಾರ್ಥನೆ ಮುಗಿದ ಕೂಡಲೆ, 'ಕಸ್ತೂರ ಬಾ' ಅವರು ಗಾಂಧಿಜಿಯು ಬಳಿಗೆ ಬಂದರು. "ಯಾಕೆ! ನನ್ನಿಂದ ಅಡಿಗೆ ಮಾಡುವದಾಗದೆಂದು ಬೇರೆಯವರಿಗೆ ಹೇಳಿದ್ದಿರಾ? ನಾನು ಅಷ್ಟು ಕೈಲಾಗದವಳೇ?" ಎಂದು ಕೇಳಿದರು. ಆಗ ಗಾಂಧಿಜಿ – "ನೀನು ಕೈಲಾಗದವಳೆಂದು ನಾನು ತಿಳಿದಿಲ್ಲ. ಮಧ್ಯಾಹ್ನದವರೆಗೆ ಕೆಲಸ ಮಾಡಿ, ದಣಿದು ನೀನು ಅದೇ ಮಲಗಿದ್ದೆ. ನಿನಗೆ ತೊಂದರೆ ಕೊಡಬಾರದೆಂದು, ಆಶ್ರಮದೊಳಗಿನ ಇಬ್ಬರಿಗೆ ಅಡಿಗೆ ಮಾಡಲು ತಿಳಿಸಿದ್ದೆನು" ಎಂದು ಮುಗುಳು ನಗೆ ನಗುತ್ತ ಅಂದರು. 'ಬಾ' ಅವರು ಸುಮ್ಮನಾದರು.

'ಕಸ್ತೂರ ಬಾ' ಅವರು ಚಿಕ್ಕಂದಿನಲ್ಲಿ ರಾಮಾಯಣ ಮಹಾ ಭಾರತಗಳ ಕಥೆಗಳನ್ನು ಚೆನ್ನಾಗಿ ಓದಿದ್ದರು. ಗಂಡನ ಮಾತಿನಂತೆ ನಡೆಯಬೇಕೆಂಬದು ಅವರಿಗೆ ಮನವರಿಕೆಯಾಗಿತ್ತು. ಅದಕ್ಕಾಗಿ 'ಬಾ' ಅವರು ತಮಗೆ ಬೇಕಾದಷ್ಟು ತೊಂದರೆಯಾದರೂ ಶಾಂತ ರೀತಿಯಿಂದ ಅದನ್ನು ಸಹಿಸುತ್ತಿದ್ದರು. ಅವರು ಎಂದೂ ಯಾರ ಮೇಲೆಯೂ ಸಿಟ್ಟಿಗೇಳುತ್ತಿದ್ದಿಲ್ಲ. ಇವರಿಗೆ ತಾಳ್ಮೆ ಬಹಳ. ಇವರು ಗಾಂಧಿಜಿಯೊಡನೆ ಬಹಳ ನಮ್ರತೆಯಿಂದ ನಡೆದುಕೊಳ್ಳುವರು. ಆದರೆ ಪ್ರಸಂಗವು ಬಂದಾಗ ಅಷ್ಟೇ ಬಿರುಸಾಗುತ್ತಿದ್ದರು. ಒಮ್ಮೆ 'ಬಾ' ಅವರು ರಾಜಕೋಟಕ್ಕೆ ನಾಡಿನ ಒಂದು ಕೆಲಸಕ್ಕೆ ಹೊರಟರು. ಆ ವೇಳೆಗೆ ಅವರ ಆರೋಗ್ಯವು ಸರಿಯಾಗಿ ಇರಲಿಲ್ಲ. ಆದಕಾರಣ ರಾಜ ಕೋಟಕ್ಕೆ ಹೋಗಬೇಡವೆಂದು ಗಾಂಧಿಜಿ ಹೇಳಿದರು. 'ಬಾ' ಅವರು ಕೇಳಲಿಲ್ಲ; ಯಾಕೆಂದರೆ, ತಮ್ಮ ಶರೀರಕ್ಕಿಂತಲೂ ನಾಡಿನ ಕಾರ್ಯವು ಹೆಚ್ಚಿನದೆಂದು ಅವರು ತಿಳಿಯುತ್ತಿದ್ದರು. ಆದದರಿಂದ ಅವರು ನಾಡಿನ ಕೆಲಸಕ್ಕೆ ಹೊರಟೇ ಬಿಟ್ಟರು. ಅವರು ಗೊತ್ತು ಮಾಡಿದ ಕಾರ್ಯ ವನ್ನು ಎಷ್ಟು ಕಷ್ಟ ಬಂದರೂ ಬಿಡುತ್ತಿರಲಿಲ್ಲ.

'ಕಸ್ತೂರ ಬಾ' ಅವರು ವಿಶೇಷವಾಗಿ ಕಲಿತವರಲ್ಲ; ಆದರೂ ಮನೆತನವನ್ನು ತೂಗಿಸಿಕೊಂಡು ಹೋಗುವದರಲ್ಲಿ ನಿಪುಣರಾಗಿದ್ದರು. ಆಶ್ರಮದಲ್ಲಿ ನೂರಾರು ಜನರು ಇರುತ್ತಿದ್ದರು. 'ಬಾ' ಅವರು ಅವರೆಲ್ಲರ ಹೊಟ್ಟೆನೆತ್ತಿ ನೋಡುವರು. ಅವರಿಗೆ ಬೇನೆ ಬಂದರೆ ಮಕ್ಕಳಂತೆ ಆರೈಕೆ ಮಾಡುವರು. ಆಶ್ರಮದಲ್ಲಿ ಬರಹೋಗುವವರಂತೂ ಯಾವಾಗಲೂ ಇರುವವರೇ. 'ಬಾ' ಅವರು ಅವರೆಲ್ಲರ ಉಪಚಾರ ವನ್ನು ಬೇಸರಿಲ್ಲದೆ ಮಾಡುತ್ತಿದ್ದರು.

'ಬಾ' ಅವರು ಗಾಂಧಿಜಿಯ ಹೆಂಡತಿ ಎಂದು ಹೆಸರಾದರಷ್ಟೇ ಅಲ್ಲ. ಗಾಂಧಿಜಿಯ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಅವರಂತೆ ನಡೆದು ತೋರಿಸಿ ಹೆಸರಾದರು. ಕೊನೆಗೆ ದೇಶಕ್ಕಾಗಿ ಸೆರೆಮನೆಯನ್ನೂ ಸೇರಿದರು; ಮತ್ತು ಅವರು ಅಲ್ಲಿಯೇ ತೀರಿಕೊಂಡರು.

'ಕಸ್ತೂರ ಬಾ' ಅವರು ಭಾರತದ ಹೆಣ್ಣು ಮಕ್ಕಳಿಗೆ ಮೇಲ್ಪಂಕ್ತಿ ಯಾಗಿದ್ದಾರೆ. ಅವರನ್ನು ನಾವು ಎಂದೂ ಮರೆಯಲಾರೆವು.

**ಅಭ್ಯಸನಗಳು:—**

೧. ಗಾಂಧಿಜಿಯನ್ನು "ಬಾಪೂ" ಎಂತಲೂ, ಕಸ್ತೂರಬಾ ಅವರನ್ನು "ಬಾ" ಎಂತಲೂ ಯಾಕೆ ಕರೆಯುತ್ತಿದ್ದರು?

೨. ಮೋತಿಲಾಲ ಮೊದಲಾದವರು ಬಂದಾಗ ಗಾಂಧಿಜಿಯವರು ಅಡಿಗೆ ಮಾಡಲಿಕ್ಕೆ 'ಕಸ್ತೂರಬಾ' ಅವರಿಗೆ ಯಾಕೆ ಹೇಳಲಿಲ್ಲ?

೩. 'ಬಾ' ಅವರು ಬಾಪುವಿಗೆ ಏನೆಂದು ಕೇಳಿದರು?

೪. 'ಬಾ' ಅವರಲ್ಲಿ ಕಂಡುಬರುವ ಒಳ್ಳೆಯ ಗುಣಗಳು ಯಾವವು?

೫. ಕೆಳಗೆ ಕೊಟ್ಟ ಒಂದೊಂದು ಶಬ್ದವನ್ನು ಉಪಯೋಗಿಸಿ, ಒಂದೊಂದು ವಾಕ್ಯ ವನ್ನು ರಚಿಸಿರಿ:

ಆಶ್ರಮವಾಸಿ, ಕೈಲಾಗದವ, ತಾಳ್ಮೆ, ನಿಪುಣ, ಮೇಲ್ಪಂಕ್ತಿ.

೬. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ______ ಅವರು ಗಾಂಧಿಜಿಯವರ ಹೆಂಡತಿ.

ಆ) ಗಾಂಧಿಜಿಯವರನ್ನು ______ ಎಂತಲೂ, ______ ಅವರನ್ನು 'ಬಾ' ಎಂತಲೂ ಕರೆಯುತ್ತಿದ್ದರು.

ಇ) 'ಕಸ್ತೂರಬಾ' ಅವರು ___ ಹೆಣ್ಣು ಮಕ್ಕಳಿಗೆ ___ ___

# ೪. ಮುದುಕನೂ ಅವನ ಕುದುರೆಯೂ




ಒಬ್ಬ ಮುದುಕನು ತನ್ನ ಕುದುರೆಯನ್ನು ಮಾರುವವನಿದ್ದನು. ಅದಕ್ಕಾಗಿ ಕುದುರೆಯನ್ನು ಹಿಡಿದುಕೊಂಡು ಸಂಗಡ ತನ್ನ ಮಗನನ್ನು ಕರೆದುಕೊಂಡು ಸಂತೆಗೆ ಹೊರಟನು. ದಾರಿಯಲ್ಲಿ ಒಬ್ಬ ಹಾದಿ ಕಾರನು ಅವನನ್ನು ನೋಡಿ— "ಈತನು ಎಂಥ ಹುಚ್ಚನು ನೋಡಿರಿ! ಕುದುರೆಗೆ ದಣಿವು ಆಗಬಾರದೆಂದು, ಅದನ್ನು ಕೈಯೊಳಗೆ ಹಿಡಿದು ಕೊಂಡು ನಡೆಯುತ್ತಾನೆ," ಎಂದನು. ಅದನ್ನು ಕೇಳಿ, ಮುದುಕನು ಮಗನನ್ನು ಕುದುರೆಯ ಮೇಲೆ ಹತ್ತಿಸಿ, ತಾನು ಹಿಂದಿನಿಂದ ಕುದುರೆ ಹೊಡೆಯುತ್ತ ನಡೆದನು.

ತುಸು ಮುಂದಕ್ಕೆ ಹೋಗುವಷ್ಟರಲ್ಲಿ ಮತ್ತೊಬ್ಬನು ಆ ಹುಡುಗ ನನ್ನು ನೋಡಿ—"ಸೈ ಸೈ, ಇದ್ದರೆ ಇಂಥ ಮಕ್ಕಳಿರಬೇಕು! ಮುಪ್ಪಿನ ತಂದೆಯನ್ನು ನಡೆಸುತ್ತ ಕಾಮಣ್ಣನ ಹಾಗೆ ಕುದುರೆಯ ಮೇಲೆ ಕುಳಿತು ಕೊಂಡು ಹೋಗಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೋ?" ಎಂದನು. ಆ ಮಾತು ಕೇಳಿ ತಂದೆಯು ಮಗನನ್ನು ಇಳಿಸಿ, ತಾನು ಕುದುರೆಯ ಮೇಲೆ ಕುಳಿತನು.

ಸ್ವಲ್ಪ ಮುಂದಕ್ಕೆ ಹೋಗಲು ಮೂರನೆಯವನೊಬ್ಬನು ಅವನನ್ನು ನೋಡಿ—"ಮಗನ ಜೀವಕ್ಕಿಂತ ಈ ಮುದುಕನ ಜೀವ ಹೆಚ್ಚಿನದಿದ್ದೀತೇ? ಓಡಿ ಓಡಿ ಹುಡುಗ ದಣಿದರೂ ಇವನಿಗೆ ಅರಿವೇ ಇಲ್ಲ. ಕುದುರೆಯ ಮೇಲೆ ಕುಳಿತುಕೊಂಡು ತನ್ನ ಸಡಗರದೊಳಗೇ ಹೋಗುತ್ತಾನೆ!" ಎಂದನು. ಆ ಮಾತು ಕೇಳಿ ಮುದುಕನು ಮಗನನ್ನು ಸಹ ಹಿಂದೆ ಕುಳ್ಳಿರಿಸಿಕೊಂಡನು.

ಬಳಿಕ ನಾಲ್ಕನೆಯವನೊಬ್ಬನು ಅವನನ್ನು ಕಂಡು— "ಈ ಕುದುರೆ ನಿಮ್ಮದ್ದೋ? ಹೆರವರದೋ?" ಎಂದು ಕೇಳಿದನು. ಅದಕ್ಕೆ ಮುದುಕನು— "ಅಯ್ಯಾ, ಮನೆಯ ಕುದುರೆ; ಹೆರವರದು ಯಾಕಾದೀತು?" ಅಂದನು. ಅದನ್ನು ಕೇಳಿ ಹಾದಿಕಾರನು—"ಅದರ ನಡು ಮುರಿದೀತೆಂಬ ಕನಿಕರವಿಲ್ಲದೆ, ಇಬ್ಬರೂ ಕುಳಿತಿರುವಿರಿ; ಅದರಿಂದ ಬಹಳ ಮಾಡಿ ಇದು ಹೆರವರ ಕುದುರೆಯಾಗಿದ್ದೀತೆಂದು ನಾನು ತಿಳಿದೆನು. ನೀವಿಬ್ಬರು ಇದನ್ನು ಹತ್ತಿಕೊಂಡು ಹೋಗುವದಕ್ಕಿಂತ ಇದನ್ನೇ ನೀವು ಸುಲಭವಾಗಿ ಹೊತ್ತುಕೊಂಡು ಹೋಗಬಹುದು", ಎಂದನು. ಆಗ ಮುದುಕನು—"ಒಳ್ಳೆಯದಯ್ಯಾ, ಇದೂ ಯಾಕಾಗಬಾರದು?" ಎಂದು ಇಬ್ಬರೂ ಇಳಿದು, ಕುದುರೆಯ ನಾಲ್ಕೂ ಕಾಲುಗಳನ್ನು ಕೂಡಿಸಿ ಕಟ್ಟಿದರು; ನಡುವೆ ಒಂದು ಕೋಲು ಹಾಕಿದರು; ಅದನ್ನು ಹೆಗಲ ಮೇಲೆ ಹೊತ್ತುಕೊಂಡು, ಕಂದಕದ ಮೇಲಿಂದ ಸಂತೆಯ ದಾರಿಯು ಹಿಡಿದು ನಡೆದರು. ಈ ಹುಚ್ಚಾಟವನ್ನು ಕಂಡು, ಸುತ್ತುಮುತ್ತಲಿನ ಜನರು ಓಡಿಬಂದು ಹಿಂಡುಗಟ್ಟಿ ನೆರೆದರು. ಅವರು ಚಪ್ಪಾಳೆ ಬಾರಿಸಿ ಗದ್ದಲ ಮಾಡಿದ್ದರಿಂದ ಕುದುರೆಯು ಮತ್ತಿಷ್ಟು ಗಾಬರಿಯಾಗಿ ಒದ್ದಾಡಹತ್ತಿತು. ಅದರಿಂದ ಕೋಲು ಮುರಿದು ಆ ಕುದುರೆಯು ಪೂಲ ಮೇಲಿಂದ ಕೆಳಗೆ ಕಂದಕದಲ್ಲಿ ಬಿದ್ದು ಸತ್ತುಹೋಯಿತು. ನೆರೆದ ಜನರು ಆ ಮುದುಕನನ್ನು ಮನಬಂದಂತೆ ಹಳಿದರು.

ಕಂಡ ಕಂಡವರನ್ನೆಲ್ಲ ಸಮಾಧಾನ ಮಾಡುವದಕ್ಕಾಗಿ ಆ ಮುದುಕನು ಮಾಡಿದ ಯತ್ನವು ಕೈಗೂಡಲಿಲ್ಲ. ಕಡೆಗೆ ತಾನೇ

ಮಾನಗೇಡಿಯಾಗಿ, ಕುದುರೆಯನ್ನೂ ಕಳೆದುಕೊಂಡು ಮನೆಗೆ ಹೋದನು. ಹೇಗೆ ನಡೆದರೂ ಜನರು ಹೆಸರಿಡುತ್ತಾರೆ; ಆದದರಿಂದ ಎಲ್ಲರನ್ನೂ ಮೆಚ್ಚಿಸಲಿಕ್ಕೆ ಹವಣಿಸದೆ, ತಮಗೆ ಹಿತವಾಗುವಂತೆ, ಪರರಿಗೆ ಕೇಡಾಗದಂತೆ ನಡೆಯತಕ್ಕದ್ದು.

**ಅಭ್ಯಸನಗಳು:—**

೧. ಮುದುಕನು ತನ್ನ ಮಗನೊಡನೆ ಎಲ್ಲಿಗೆ ಹೊರಟಿದ್ದನು?

೨. ದಾರಿಯಲ್ಲಿ ಮೊದಲನೆಯ ದಾರಿಕಾರನು ಆತನಿಗೆ ಏನು ಅಂದನು? ಅದಕ್ಕೆ ಮುದುಕನು ಏನು ಮಾಡಿದನು?

ಎರಡನೆಯ ದಾರಿಕಾರನು ಮುದುಕನ ಮಗನಿಗೆ ಏನು ಅಂದನು? ಅದಕ್ಕೆ ಅವನು ಏನು ಮಾಡಿದನು?

ಮೂರನೆಯ ದಾರಿಕಾರನು ಮುದುಕನಿಗೆ ಏನು ಅಂದನು? ಅದಕ್ಕೆ ಅವನು ಏನು ಮಾಡಿದನು?

ಕಡೆಯ ದಾರಿಕಾರನು ಮುದುಕನಿಗೆ ಏನು ಅಂದನು? ಅದಕ್ಕೆ ಮುದುಕನು ಏನು ಮಾಡಿದನು?

೬. ಕಡೆಗೆ ಮುದುಕನ ಸ್ಥಿತಿಯು ಏನಾಯಿತು?

೭. ಈ ಪಾಠದಿಂದ ನಿಮಗೆ ಯಾವ ಮಾತು ತಿಳಿಯಿತು?

೮. ಈ ಕಥೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

೯. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ತುಂಬಿರಿ:—

೧) ________ ಇದ್ದರೆ ಇಂಥ ಮಕ್ಕಳಿರಬೇಕು!

೨) ________ ಜೀವಕ್ಕಿಂತ ಈ ಮುದುಕನ ಜೀವ

೩) ನೆರೆದ ______ ಆ ಮುದುಕನನ್ನು ಮನಬಂದಂತೆ

೪) ಹೇಗೆ ನಡೆದರೂ ಜನರು ________

೧೦. ಕೆಳಗೆ ಕೊಟ್ಟ ಒಂದೊಂದು ಶಬ್ದವನ್ನು ಉಪಯೋಗಿಸಿ, ಒಂದೊಂದು ವಾಕ್ಯವನ್ನು ರಚಿಸಿರಿ:

ಹೆರವರು, ಹಾದಿಕಾರ, ಹುಚ್ಚಾಟ, ಮತ್ತಿಷ್ಟು, ಮಾನಗೇಡಿ, ಹವಣಿಸು

೧೧. ಮಾನಗೇಡಿ ಎಂದರೆ ಮರ್ಯಾದೆಯನ್ನು ಕಳೆದುಕೊಂಡವ.

ತಿಳಿಗೇಡಿ, ಅಂದಗೇಡಿ, ಕಿಡಿಗೇಡಿ ಈ ಶಬ್ದಗಳ ಅರ್ಥಹೇಳಿರಿ.

# ೫. ಅಂಚೆಯವ



ಓಲೆಯ ಹಂಚಲು ಹೊರಡುವೆ ನಾನು,
ದಿನದಿನ ಆಗಸಕೇರಲು ಭಾನು;
ಮನೆಯಲಿ ನೀವು, ಬಿಸಿಲಲಿ ನಾನು!
ಕಾಗದ ಬಂತು, ಕಾಗದವು || ೧ ||

ಹೆಗಲಲಿ ತೊಗಲಿನ ಚೀಲವ ಹಾಕಿ,
ಕಾಲಲಿ ಚರ್ಮದ ಜೋಡನು ಹಾಕಿ,
ತಲೆಯಲಿ ಖಾದಿಯ ಪಗಡಿಯ ಹಾಕಿ,
ಓಲೆಯ ತಂದೆ ಓಲೆಯನು || ೨ ||

ಒಳಗಿಂದಲೆ ಜನರೆನ್ನನು ನೋಡಿ,
ಬೇಗನೆ ಹೊರ ಅಂಗಳಕೋಡಿ,
"ಕಾಗದವಿದೆಯೇ" ಎನ್ನುವುದುಂಟು;
ಕಾಗದ ಬಂತು ಕಾಗದವು || ೩ ||

ಸೊಗಸಿನ ಓಲೆಯ ತರುವೆನು ನಿಮಗೆ;
ವ್ಯಸನದ ಓಲೆಯ ಕೊಡುವೆನು ತಮಗೆ;
ಎಲ್ಲಾ ಓಲೆಗಳೊಂದೇ ನಮಗೆ!
ಓಲೆಯ ತಂದೆ ಓಲೆಯನು || ೪ ||
ಇದು ಧನಹೀನರ ಇದು ಧನವಂತರ,
ಇದು ಗುಣಹೀನರ, ಇದು ಗುಣವಂತರ
ಕಾಗದವೆನ್ನುತ ಮಾಡೆನು ಅಂತರ!
ಕಾಗದ ಬಂತು ಕಾಗದವು || ೫ ||
ಓಲೆಯ ಕೊಡುವಧಿಕಾರಿಯು ನಾನು,
ಆದರು ಅದರಲಿ ಬರೆದುದು ಏನು
ಎಂಬುದನರಿಯೆನು, ಬಲುಸುಖಿ ನಾನು!
ಕಾಗದ ಬಂತು ಕಾಗದವು || ೬ ||

**ಅಭ್ಯಸನಗಳು:—**

೧. ಓಲೆಯ ಹಂಚುವವನು ಯಾರು? ಅವನ ಕಷ್ಟಗಳು ಯಾವವು?
೨. ಅಂಚೆಯವನು ಯಾವಾಗ ಓಲೆಗಳನ್ನು ತರುವನು?
೩. ಜನರು ಅವನನ್ನು ಕಂಡು ಏನು ಅನ್ನುವರು?
೪. ಅವನು ಎಂಥ ಎಂಥ ಸುದ್ದಿಗಳನ್ನು ತರುವನು?
೫. ಕೆಳಗಿನ ಮಾತುಗಳ ಅರ್ಥ ಹೇಳಿರಿ:
   ಅ) ಎಲ್ಲಾ ಸುದ್ದಿಗಳೊಂದೇ ನಮಗೆ.
   ಆ) ಬಲು ಸುಖಿ ನಾನು.
೬. ಅಂಚೆಯವನ ಉಡುಪು ಹೇಗೆ ಇರುತ್ತದೆ?
೭. ಕೆಳಗೆ ತೆರವಿಟ್ಟಲ್ಲಿ ತಕ್ಕ ಶಬ್ದವನ್ನು ತುಂಬಿರಿ·
   ಉದಾ: ಓಲಿಗಳನ್ನು ಹಂಚುವವ ಅಂಚೆಯವ.
   ಅ) ಕಟ್ಟಿಗೆಯ ಕೆಲಸ ಮಾಡುವವ ________.
   ಆ) ಕಬ್ಬಿಣದಿಂದ ಕೆಲಸ ಮಾಡುವವ ________.
   ಇ) ಬಟ್ಟೆ ನೇಯುವವ ________.
   ಈ) ಶಿಗರಿಯಿಂದ ಕೆಲಸ ಮಾಡುವವ ________.

ನ್ರ, ಬುದ್ಧಿಹೀನ
ಈ ಶಬ್ದಗಳ ವಿರುದ್ಧಾರ್ಥಕ ಶಬ್ದಗಳನ್ನು ಹೇಳಿರಿ.

# ೭. ಕವಲೆತ್ತು



ನಮ್ಮ ವೀರಪ್ಪಣ್ಣನವರ ಹಂಡಬಂಡ ಆಕಳು ಹೋರಿಕರುವನ್ನು ಈದಿತ್ತು. ಮನೆಯ ದನಗಳೆಲ್ಲ ಮೇಯಲಿಕ್ಕೆ ಅಡವಿಗೆ ಹೋದಾಗ ಆ ಹೋರಿಯು ಸಂಜೆಯ ತನಕ ಕೊಟ್ಟಿಗೆಯಲ್ಲಿ ಒಂದೇ ಇರಬೇಕಾಗುತ್ತಿತ್ತು.

ಒಂದು ದಿನ ಮಧ್ಯಾಹ್ನದಲ್ಲಿ ಕವಲೆತ್ತಿನವನು "ಬುಗು! ಬುಗು! ಬುಗು!" ಎಂದು ಬಾರಿಸುತ್ತ ಆ ಮನೆಗೆ ಬಂದನು. ಆ ಕವಲೆತ್ತು ಒಳ್ಳೆಯ ಮಾಟವಾಗಿತ್ತು. ಅದರ ಮೈಕೈ ತುಂಬಿತ್ತು. ಎತ್ತರವಾದ ಇಣಿ ಇತ್ತು. ಚೆಲುವಾದ ಕೋಡುಗಳು ಒಪ್ಪುತ್ತಿದ್ದವು. ಮೈಮೇಲೆ ಬಣ್ಣ ಬಣ್ಣದ ಝೂಲು, ಕೊರಳಲ್ಲಿ ಸರಪಳಿ, ಗಂಟೆಯ ಸರ ಚೆಲುವಾಗಿದ್ದವು. ಕೋಡುಗಳಲ್ಲಿ ಹೊಳೆಯುವ ಕೊಂಬಣಸು, ಹಣೆಯಲ್ಲಿ ಕನ್ನಡಿಯ ಪಟ್ಟಿ ಲಕಲಕಿಸುತ್ತಿದ್ದವು. "ಬಸವಣ್ಣ! ಬಸವಣ್ಣ! ಈ ಮನೆಯುವರು ಭಾಗ್ಯವಂತರು" ಎಂದು ಬುರುಬುರುಕಿ ಬಾರಿಸಲು, ಅದು "ಅಹುದು! ಅಹುದು!" ಎನ್ನುವಂತೆ ತಲೆ ಹಾಕುವದು. "ಧನಿಯರು ದಾನ ಮಾಡುವಾಗ ಹೇಗೆ ಕೈ ಎತ್ತುವರು?" ಎಂದಾಗ ಮುಂದಿನ ಬಲಗಾಲು ಎತ್ತಿ ತೋರಿಸುತ್ತಿತ್ತು. ತಾಯಿ

ಯವರಿಗೆ ನಮಸ್ಕಾರ ಮಾಡಯ್ಯಾ ಎಂದಾಗ ಮುಂಗಾಲು ಚಾಚಿ ತಲೆ ಬಾಗಿಸುತ್ತಿತ್ತು. ಅದನ್ನು ನೋಡಿ ಮನೆಯವರು ಮೊರದ ತುಂಬ ಕಾಳು ಹಾಕಿದರು. ಮೇಲೆ ಒಂದು ರೊಟ್ಟಿಯನ್ನು ಕೊಟ್ಟರು.

ಇವನ್ನೆಲ್ಲ ಕಂಡು ಆ ಹೋರಿಕರುವಿಗೆ ಚಿಂತೆ ಆಯಿತು. ಮೇವು ತಿನ್ನದೆ ನೀರು ಕುಡಿಯದೆ ತೆಪ್ಪಗೆ ನಿಂತುಬಿಟ್ಟಿತು. ಸಂಜೆಗೆ ಅದರ ತಾಯಿ ಆಕಳು ಅಡವಿಯಿಂದ ಬಂದಿತು. ಕರುವಿನ ಬಾಡಿದ ಮುಖವನ್ನು ಕಂಡಿತು. "ಮಗೂ, ನಿನಗೇನಾಗಿದೆ? ಹೊಟ್ಟೆ ನೋಯುತ್ತದೆಯೋ? ಬಾಯಿಗೆ ಬೊಕ್ಕೆ ಆಗಿ, ಮೇವು ತಿನ್ನಲು ಬಾರದಂತೆ ಆಗಿದೆಯೋ? ಏನಾಗಿದೆ? ಹೇಳು," ಎಂದು ರಂಬಿಸಿ ಕೇಳಿತು.

ಆ ಹೋರಿಯು ಅಂದಿತು-"ಅವ್ವಾ! ಏನು ಹೇಳಲಿ! ಮಧ್ಯಾಹ್ನ ದಲ್ಲಿ ಒಂದು ಕವಲೆತ್ತು ಬಂದಿತ್ತು. ಅದರ ಉಡಿಗೆ ಬಹು ಚೆಂದ ವಾಗಿತ್ತು. ಅದನ್ನು ಅಂದವಾಗಿ ಸಿಂಗರಿಸಿದ್ದರು. ಅದು ಹೆಚ್ಚಿನ ವಿದ್ಯೆ ಕಲಿತಿತ್ತು. ಇದ್ದರೆ ಇರಬೇಕು ಹಾಗೆ; ಗೂಟದ ಮುಂದೆ ನಿಲ್ಲುವದಕ್ಕಿಂತ ಕವಲೆತ್ತು ಆಗುವದು ಬಹಳ ಸುಖ, ನೋಡು! ನಾನು ಸಹ ಕವಲೆತ್ತು ಆಗಬೇಕೆಂದು ಮಾಡಿರುವೆನು."

ಆಕಳು ಕರುವಿನ ಮಾತನ್ನು ಕೇಳಿ ನಕ್ಕಿತು. "ಕಂದಾ! ನಿನಗೆ ಈ ವಿಚಾರ ಏಕೆ ಬಂದಿತು? ನೀನು ಕವಲೆತ್ತಿನ ವೇಷವನ್ನು ಕಂಡು ಮರುಳಾಗಿರುವೆ. ತಿಳಿಯದೆಯೆ ತಲೆ ಅಲ್ಲಾಡಿಸುವದು, ಬಲಗಾಲೆತ್ತು ವದು, ನಮಸ್ಕಾರ ಮಾಡುವದು ಇವೆಲ್ಲ ವಿದ್ಯೆ ಎಂದು ತಿಳಿದಿರುವೆ. ಅದರ ಸಿಂಗಾರವೂ, ವಿದ್ಯೆಯೂ ತಿರುಕನ ಸಲುವಾಗಿ ಅವೆ. ಇದನ್ನು ಯೋಚಿಸಿರುವೆಯಾ? ಆ ತಿರುಕನು ತನ್ನ ಹೊಟ್ಟೆ ತುಂಬಿಕೊಳ್ಳುವ ಹಂಚಿಕೆಯಿಂದ ಆ ಕವಲೆತ್ತಿಗೆ ಸಿಂಗಾರ ಮಾಡಿರುವನು. ಅದಕ್ಕೆ ತಲೆ ಹಾಕಲು, ಕಾಲು ಎತ್ತಲು ಕಲಿಸಿರುವನು. ಈ ವಿದ್ಯೆಯಿಂದ ಅವನ ಜೋಳಿಗೆ ತುಂಬುವದು."

ಕರು:— ಕವಲೆತ್ತಿಗೂ ಒಳ್ಳೆಯ ಮೇವು ಹಾಕುವದಿಲ್ಲವೇ?

ಆಕಳು:— ಅಹುದು. ಆದರೆ ಮಂದಿಯ ಮಾತು ತಿಳಿಯ ದಿದ್ದರೂ ಅಹುದೆಂದು ಗೋಣು ಹಾಕುವದು, ಸಿಕ್ಕವರಿಗೆ ತಲೆ ಬಾಗಿ ಸುವದು ಒಳ್ಳೆಯದಲ್ಲ.

ಕರು:— ಹಾಗಾದರೆ, ನಮ್ಮ ಗತಿಯಾದರೂ ಏನಿದೆ?

ಆಕಳು:— ನೀನು ದೊಡ್ಡವನಾದ ಬಳಿಕ ಮೈಮುರಿದು ದುಡಿಯಹತ್ತುವೆ. ಹೊಟ್ಟೆ ತುಂಬ ತಿನ್ನುವೆ. ಜನರ ಹೊಟ್ಟೆ ತುಂಬಲು ನೆರವಾಗುವೆ. ಸುಗ್ಗಿಯ ದಿನದಲ್ಲಿ ನಮಗಿರುವಷ್ಟು ಸೊಗಸು ಆ ಕವಲೆತ್ತಿಗೆ ಇರುವದೇ?

ಕರು:— ಗಳೆ ಹೂಡಿದಾಗ ಮೊನ್ನೆ ನಮ್ಮ ಎತ್ತು ಮೈತುಂಬ ಬಡಿಸಿಕೊಂಡಿತು.

ಆಕಳು:—ಠಕ್ಕತನಕ್ಕೆ ಏಟು ಬೀಳುತ್ತವೆ. ಒಕ್ಕಲಿಗರು ತಮ್ಮ ಎತ್ತುಗಳನ್ನು ಬಹಳ ಪ್ರೀತಿಸುವರು; ಝೂಲು ಹಾಕುವರು; ಗಂಟೆಯ ಸರ ಕಟ್ಟುವರು; ಸರಪಳಿ ಹಾಕುವರು;ಹಣೆಪಟ್ಟಿ ಕಟ್ಟುವರು;ತೆನೆಗಣಿಕೆ, ಹಿಂಡಿ, ಹತ್ತಿಯ ಕಾಳು ತಿನಿಸುವರು; ಕೊಟ್ಟಿಗೆಯಲ್ಲಿ ಕಟ್ಟುವರು.

ಕರು:—ಅವ್ವಾ! ತಿಳಿಯಿತು. ದುಡಿದು ಉಣ್ಣಬೇಕು;ಬುದ್ಧಿಗೇಡಿಗಳಾಗಬಾರದು. ಅಹುದಲ್ಲವೆ?

ಅಷ್ಟರಲ್ಲಿ ವೀರಣ್ಣನವರ ಹೆಂಡತಿ ಹಿಂಡಿಕೊಳ್ಳಲು ಬಂದಳು. ಆಕಳಿಗೆ ಮುರುವಿಟ್ಟಳು. ಹಿಂಡಿಕೊಳ್ಳಬೇಕೆಂದು ಕರುವನ್ನು ಬಿಟ್ಟಳು. ಅದು ಜಿಗಿಯುತ್ತ ತಾಯಿಯ ಮೊಲೆ ಕುಡಿಯಹತ್ತಿತು. ಆಕಳು ಕರುವಿನ ಮೈ ನೆಕ್ಕಹತ್ತಿತು.

**ಅಭ್ಯಸನಗಳು:—**

೧. ಕವಲೆತ್ತು ಏನು ಮಾಡಿ ತೋರಿಸಿತು?

೨. ಕವಲೆತ್ತನ್ನು ಕಂಡು ಆ ಕರುವಿಗೆ ಏಕೆ ಚಿಂತೆಯಾಯಿತು?

೩. ಆಕಳು ಕರುವಿಗೆ ಯಾವ ಬುದ್ಧಿಯ ಮಾತುಗಳನ್ನು ಹೇಳಿತು?

೪. ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ಕವಲೆತ್ತನ್ನು ಕಂಡು ಕರುವಿಗೆ ________ ಆಯಿತು.

ಬ) ಬಾಯಿಗೆ ________ ಆಗಿ ಮೇವು ತಿನ್ನಲು ಬಾರದಾಗಿದೆಯೇ?

ಕ) ಆ ತಿರುಕನು ________ ಯಿಂದ ಆ ಕವಲೆತ್ತಿಗೆ ಸಿಂಗಾರ ಮಾಡುವನು.

ಡ) ________ ಉಣ್ಣಬೇಕು; ________ ಗಳಾಗಬಾರದು.

೫. ಕವಲೆತ್ತಿನ ವರ್ಣನೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

೬. ಕೆಳಗೆ ಕೊಟ್ಟ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯವನ್ನು ರಚಿಸಿರಿ:

**ತೆಪ್ಪಗೆ, ಮೈತುಂಬ, ಹೊಟ್ಟೆತುಂಬ, ಏಟು, ಕೊಟಿಗೆ**

# ೭. ರೊಟ್ಟಿ ಮತ್ತು ಬಿಸ್ಕೀಟು

ಬಸವನು ಬಿಸ್ಕೀಟು ತುಂಬಿದ ಡಬ್ಬಿಯನ್ನು ಕೈಯಲ್ಲಿ ಹಿಡಿದು ಕೊಂಡು ಅಡಿಗೆಯ ಮನೆಯೊಳಗೆ ಹೋದನು. ಅವನ ತಾಯಿಯು ರೊಟ್ಟಿಯನ್ನು ಮಾಡುತ್ತಿದ್ದಳು. ಬಸವನು ಡಬ್ಬಿಯೊಳಗಿನ ಬಿಸ್ಕೀಟನ್ನು ತಿನ್ನಬೇಕೆಂದು ಹೊರಗೆ ತೆಗೆದನು. ಆಗ ರೊಟ್ಟಿಗೂ ಬಿಸ್ಕೀಟಿಗೂ ಜಗಳ ನಡೆಯಿತು.

ರೊಟ್ಟಿ:— ನನ್ನ ಮನೆಯಲ್ಲಿ ನೀನೇಕೆ ಬಂದಿರುವೆ? ನೀನು ಇಲ್ಲಿಗೆ ಬರತಕ್ಕದ್ದಲ್ಲ. ನಡೆ ಹೊರಗೆ!

ಬಿಸ್ಕೀಟು:—ಮನೆಗೆ ಬಂದವರಿಗೆ ಕೆಟ್ಟಮಾತನ್ನು ಆಡಬಾರದು. ನಿನ್ನ ಮನೆಯವರು ಕರೆದು ತಾರದಿದ್ದರೆ ನಾನೇಕೆ ಬರುತ್ತಿದ್ದೆ? ನಿನಗಿಂತ ನಾನು ಪ್ರೀತಿಯವನೆಂದೇ ನನ್ನನ್ನು ದುಡ್ಡು ಕೊಟ್ಟು ತಂದಿರುವರಲ್ಲವೇ?

ರೊಟ್ಟಿ:— ತಂದರೆ ಏನಾಯಿತು! ನೀನೇನು ದಿನದ ಊಟಕ್ಕೆ ಉಪಯೋಗ ಬೀಳುವೆಯಾ? ನಿನ್ನ ಚಟ ಹತ್ತಿ ಮಕ್ಕಳು ಚೆನ್ನಾಗಿ ಊಟವನ್ನು ಮಾಡುವದಿಲ್ಲ.

ಬಿಸ್ಕೀಟು:—ತಿಳಿಯಿತು, ತಿಳಿಯಿತು ನಿನ್ನ ಮಾತಿನ ಗುಟ್ಟು. ನಾನು ಇದ್ದರೆ ನಿನ್ನ ಯೋಗ್ಯತೆ ಕಡಿಮೆಯಾಗುವದು. ಅದಕ್ಕೆ ನೀನು ಹೀಗೆ ಮಾತನಾಡುವೆ. ನೋಡು, ನಾನು ತಗಡಿನ ಡಬ್ಬಿಯಲ್ಲಿ ಬೆಚ್ಚಗೆ ಇರುವೆ. ನನ್ನ ಮನೆ ಕನ್ನಡಿಯ ಕಪಾಟು. ನೀನು ಬಿದ್ದಿರುವದು ಬಿದಿರಿನ ಬುಟ್ಟಿಯಲ್ಲಿ! ನಿನಗೇನಾದರೂ ಮರ್ಯಾದೆ ಇದೆಯೇ?

ರೊಟ್ಟಿ:—ಮರ್ಯಾದೆಗಾಗಿ ಬಾಯಿ ಬಿಡುವವ ನೀನು! ನಾನು ಬಡವರು ಬಲ್ಲಿದರು ಎನ್ನದೆ ಎಲ್ಲರಿಗೂ ಬೇಕಾಗಿರುತ್ತೇನೆ.

ಬಿಸ್ಕೀಟು:— ಹೌದು, ಹೌದು. ದಿನಾಲು ಹೆಂಗಸರ ಕೈಯ ಪೆಟ್ಟು ತಿಂದು, ನಿನ್ನ ಮೈ ನುಗ್ಗಾಗಿರುವದು. ಕಾಯ್ದು ಹಂಚಿನ ಮೇಲೆ ಬಿದ್ದು, ಮೈ ಸುಟ್ಟುಕೊಂಡಿರುವೆ. ಕೆಂಡದ ಮೇಲೆ ಇಟ್ಟಾಗ ಹೊಟ್ಟೆ ಉಬ್ಬಿ ಸಾಯಲಿಕ್ಕಾಗುವೆ.

ರೊಟ್ಟಿ:— ಹಾಗೆ ಹೇಳಬೇಡಪ್ಪಾ! ಇಬ್ಬರನ್ನೂ ಬೇಯಿಸಲು ಬೆಂಕಿ ಬೇಕೇ ಬೇಕು. ನನಗೆ ಕಟ್ಟಿಗೆಯ ಉರಿಯಾದರೆ ನಿನಗೆ ಇದ್ದಲಿಯ ಕಿಚ್ಚು. ನಿನ್ನನ್ನು ಬೇಯಿಸುವಾಗ ಉಸುರು ಕಟ್ಟುವಂತೆ ಮುಚ್ಚಿಡುವರು. ಆಗ ಉಬ್ಬಿದ ನಿನ್ನ ಹೊಟ್ಟೆ ಇನ್ನೂ ಇಳಿದಿಲ್ಲ. ಯಾಕೆ ವಾದಿಸುವೆ?

ಬಿಸ್ಕೀಟು:— ಸುಮ್ಮನೆ ಕೆಣಕಬೇಡ. ನಿನಗೆ ಮನೆ ಬಿಟ್ಟು ಹೊರಗೆ ಹೋಗಿ ಗೊತ್ತಿಲ್ಲ. ನಾನು ದೇಶ ದೇಶಗಳನ್ನು ತಿರುಗುವೆ. ನಿನ್ನ ಬಾಳು ಒಂದು ದಿನ. ನಾನು ಎಷ್ಟು ದಿನ ಬದುಕುವೆ ನೋಡು?

ರೊಟ್ಟಿ:— ಹೂವು ಒಂದೇ ದಿನ ಇದ್ದರೇನಾಯಿತು? ಅದು ದೇವರ ಪೂಜೆಗೆ ಸಲ್ಲುವದು. ಹಾಗೆ ನನ್ನ ಇರುವಿಕೆ! ನಿನ್ನದೇನಿದೆ? ನಾನು ಎಲ್ಲರಿಗೆ ಬೇಕಾಗಿರುವೆ.

ಹೀಗೆ ರೊಟ್ಟಿ ಬಿಸ್ಕೀಟುಗಳಲ್ಲಿ ಮಾತು ನಡೆದಿರುವಾಗಲೇ ಬಸವನ ತಾಯಿಯು ಅವನಿಗೆ ಹೇಳಿದಳು:— "ಮಗು, ಬಿಸ್ಕೀಟನ್ನು ಹೊರಗೆ ಇಟ್ಟು ಬಾ; ಬಿಸಿ ರೊಟ್ಟಿ ಬೆಣ್ಣೆ ಕೊಡುವೆ. ಮೊದಲು ಊಟ ಮಾಡು; ಬಿಸ್ಕೀಟನಿಂದ ಹೊಟ್ಟೆ ತುಂಬದು. ರೊಟ್ಟಿಯನ್ನು ತಿಂದರೆ ಕಸುವು ಬರುವದು. ನಾಳೆ ದೊಡ್ಡವನಾಗುವೆ."

ಬಸವನು ಕೈಯೊಳಗಿನ ಬಿಸ್ಕೀಟನ್ನು ದೂರ ಇಟ್ಟು, ಊಟಕ್ಕೆ ಕುಳಿತನು. ತಾಟನಲ್ಲಿ ಅವ್ವನು ಬಿಸಿಬಿಸಿ ರೊಟ್ಟಿಯನ್ನು ಹಾಕಿದಳು. ಅದರ ಮೇಲೆ ಬೆಣ್ಣೆಯ ಕರಣೆ ಇಟ್ಟಳು. ಉಪ್ಪಿನಕಾಯಿ ಹಾಕಿದಳು. ಎಂಥ ಸಿಹಿಯಾದ ತಿನಿಸು ಅದು! ರೊಟ್ಟಿಯ ಊಟಕ್ಕಿಂತ ಹೆಚ್ಚಿನ ಊಟವಿಲ್ಲ. ಅದನ್ನು ತಿನ್ನಲು ಎಂದೂ ಬೇಸರ ಬರುವದಿಲ್ಲ.

**ಅಭ್ಯಸನಗಳು:—**

೧. ಬಿಸ್ಕೀಟನ್ನು ಹೇಗೆ ಮಾಡುವರು?
೨. ರೊಟ್ಟಿ ಹೆಚ್ಚಿನದೋ? ಬಿಸ್ಕೀಟು ಹೆಚ್ಚಿನದೊ? ಯಾಕೆ?
೩. ತಾಯಿಯು ಬಸವನಿಗೆ ಏನು ಹೇಳಿದಳು?

# ೮. ಶೇಖ ಮಹಮ್ಮದ



ಶೇಖ ಮಹಮ್ಮದನೆಂಬ ಒಬ್ಬ ಮೊಟ್ಟೆಗಾರನಿದ್ದನು. ಅವನು ಮೊಟ್ಟೆ ಹೊತ್ತು ಹೊಟ್ಟೆ ತುಂಬಿಕೊಳ್ಳುತ್ತಿದ್ದನು. ಒಂದುದಿನ ಒಬ್ಬ ಗೃಹಸ್ಥನು ಒಂದು ಕೊಡ ತುಪ್ಪವನ್ನು ಕೊಂಡು, ಅವನ ತಲೆಯಮೇಲೆ ಹೊರಿಸಿ ತಾನು ಅವನ ಬೆನ್ನ ಹಿಂದೆ ನಡೆದನು. ದಾರಿಗುಂಟ ಶೇಖ ಮಹಮ್ಮದನು ಮನಸ್ಸಿನೊಳಗೆ ಹೀಗೆ ಆಲೋಚಿಸತೊಡಗಿದನು.

"ಈ ಕೊಡವನ್ನು ಇವರ ಮನೆಗೆ ಮುಟ್ಟಿಸಿದರೆ ಹನ್ನೆರಡು ಆಣೆ ಕೂಲಿ ಬರುವದು. ಆ ಹಣವನ್ನು ಮನೆಯ ಬಳಕೆಗೆ ಹಾಕದೆ, ಒಂದು ಸಣ್ಣ ಹೇಟೆಯನ್ನು ಕೊಳ್ಳುವೆನು. ಅದು ದೊಡ್ಡದಾದ ಮೇಲೆ ಸರತಿಗೆ ೨೦–೩೦ರಂತೆ ತತ್ತಿಗಳನ್ನು ಹಾಕುವದು. ಅವೆಲ್ಲ ಮರಿಯಾಗಿ ದೊಡ್ಡವಾದ ಮೇಲೆ ಕೆಲವು ತಾಯಿಯಂತೆ ತತ್ತಿಗಳನ್ನು ಹಾಕುವವು. ಹೀಗಾಗಿ ತುಸು ದಿವಸಗಳಲ್ಲಿ ದೊಡ್ಡದೊಂದು ಕೋಳಿಯ ಹಿಂಡೇ ಆಗುವದು. ಆಗ ಅವುಗಳನ್ನೆಲ್ಲ ಮಾರಿ ಬಂದ ಹಣದಿಂದ ಕೆಲವು ಕುರಿಗಳನ್ನು ಕೊಳ್ಳುವೆನು. ಅವುಗಳ ಪೀಳಿಗೆಯಾದರೂ ದಿನದಿನಕ್ಕೆ ಬೆಳೆಯುತ್ತ ಹೋಗಿ ಕೆಲವು ದಿವಸಗಳಲ್ಲಿ ನೂರಾರು ಕುರಿಗಳಾಗುವವು. ಅವುಗಳನ್ನು

ಮಾರಲು ಬಹಳ ಹಣ ಬರುವದು. ಬಳಿಕ ಇಂಥ ಸಣ್ಣ ವ್ಯಾಪಾರವನ್ನು ಬಿಟ್ಟುಕೊಟ್ಟು, ಮುತ್ತು ರತ್ನಗಳ ವ್ಯಾಪಾರ ನಡೆಸುವೆನು. ಆದರಿಂದ ನನ್ನ ಸಂಪತ್ತು ಬೆಳೆದು ಜನರು ನನ್ನನ್ನು ದೊಡ್ಡ ಜನರಲ್ಲಿ ಎಣಿಸುವರು.

ಇಷ್ಟಾದ ಬಳಿಕ ಸರದಾರರೂ, ಶ್ರೀಮಂತರೂ ನನಗೆ ಹೆಣ್ಣು ಕೊಡಲಿಕ್ಕೆ ಎಡತಾಕುವದು ಏನಾಶ್ಚರ್ಯ! ನಾನು ಒಬ್ಬ ಶ್ರೀಮಂತನ ಚೆಲುವೆಯಾದ ಮಗಳನ್ನು ಮದುವೆಯಾಗುವೆನು. ಅವಳೊಡನೆ ಕೆಲವು ದಿವಸ ಬಾಳುವೆ ಮಾಡುತ್ತಿರಲು ನನಗೆ ನಾಲ್ವರು ಗಂಡು ಮಕ್ಕಳೂ ನಾಲ್ವರು ಹೆಣ್ಣು ಮಕ್ಕಳೂ ಹುಟ್ಟುವರು.

ಒಂದು ದಿವಸ ಬಹಳ ವ್ಯಾಪಾರ ನಡೆಯಲು: ಮನೆಗೆ ಊಟಕ್ಕೆ ಹೋಗಲಿಕ್ಕೆ ನನಗೆ ತಡವಾಗುವದು. ಆದರಿಂದ ಹೆಂಡತಿಯು—"ನಿನ್ನ ಹಡೆದವರನ್ನು ಊಟಕ್ಕೆ ಕರೆದುಕೊಂಡು ಬಾ" ಎಂದು ಮಗನನ್ನು ಅಂಗಡಿಗೆ ಕಳುಹುವಳು. ಆಗ ನಾನು ವ್ಯಾಪಾರದ ಭರದಲ್ಲಿ ತೊಡಗಿರುವದರಿಂದ- "ಹೋಗು ಈಗ ಬರುವದಿಲ್ಲ, ಎಂದು ತಲೆಯನ್ನು ಕೊಡಹುವೆನು."

ಈ ಮೇರೆಗೆ ಅವನು ಮನಸ್ಸಿನೊಳಗೆ ಆಲೋಚಿಸುತ್ತ ತಲೆಯ ಮೇಲಿನ ಕೊಡದ ಪರಿವೆಯಿಲ್ಲದೆ ನಿಜವಾಗಿ ತಲೆಯನ್ನು ಕೊಡಹಿದನು. ಕೊಡವು ಕೆಳಗೆ ಬಿತ್ತು. ಅದು ಮಣ್ಣಿನದಾದ್ದರಿಂದ ಒಡೆದು ಚೂರು ಚೂರಾಯಿತು. ತುಪ್ಪವು ಮಣ್ಣುಪಾಲಾಯಿತು. ಅದನ್ನು ಕಂಡು ಕೊಡದ ಒಡೆಯನು ಕೈಯೊಳಗಿನ ಕೋಲಿನಿಂದ ಸೇಖಮಹಮ್ಮದನನ್ನು ತಳಿಸಿ— "ಇದೇನು ಮಾಡಿದೆ, ಐವತ್ತು ರೂಪಾಯಿಗಳ ತುಪ್ಪವನ್ನು ಹಾಳುಮಾಡಿಬಿಟ್ಟೆ" ಅಂದನು. ಕೊಡ ಬಿದ್ದದ್ದನ್ನು ಕಂಡು ಅರ್ಧ ಮರ್ಧ ಎಚ್ಚರಾಗಿದ್ದ ಸೇಖಮಹಮ್ಮದನು, ಬಡಿಗೆಯ ಹೊಡೆತದಿಂದ ಪೂರಾ ಎಚ್ಚತ್ತು— "ಒಡೆಯರೇ, ನಿಮ್ಮ ಹಾನಿಯು ಅಷ್ಟೇನು ದೊಡ್ಡದಲ್ಲ; ನನ್ನ ಹಾನಿ ಬಹಳ ದೊಡ್ಡದು. ನಾನು ಮನಸ್ಸಿನೊಳಗೆ ಮಾಡಿಕೊಳ್ಳುತ್ತ ಬಂದ ನನ್ನ ಬಾಳುವೆಯೆಲ್ಲ ಹಾಳಾಯಿತಲ್ಲ! ಇನ್ನು ನನ್ನ ಹೆಂಡಿರು ಮಕ್ಕಳನ್ನೂ ಸಿರಿ ಸಂಪತ್ತನ್ನೂ ಹೇಗೆ ಕಂಡೇನು? ಇದರಿಂದ ಯಾರ ಹಾನಿ ದೊಡ್ಡದೆಂಬದನ್ನು ತಾವೇ ವಿಚಾರಿಸಿರಿ" ಎಂದು ಹೇಳಿದನು.

**ಅಭ್ಯಸನೆಗಳು:—**

೧. ದಾರಿಯಲ್ಲಿ ಸೇಖ ಮಹಮ್ಮದನು ಏನೇನು ಆಲೋಚಿಸಿದನು?

೨. ಅವನ ತಲೆಯ ಮೇಲಿನ ಕೊಡವು ಯಾಕೆ ಕೆಳಗೆ ಬಿತ್ತು?

೩. ಕೊಡದ ಒಡೆಯನು ಅವನನ್ನು ಬಡಿಗೆಯಿಂದ ಯಾಕೆ ಬಡಿದನು?

೪. ಬಳಿಕ ಸೇಖ ಮಹಮ್ಮದನು ಏನು ಹೇಳಿದನು?

೫. ಕೆಳಗಿನ ಶಬ್ದಗಳನ್ನು ಉಪಯೋಗಿಸಿ, ವಾಕ್ಯಗಳನ್ನು ರಚಿಸಿರಿ:
ಮೊಟ್ಟೆಗಾರ, ದಾರಿಗುಂಟ, ಪರಿವೆಯಿಲ್ಲದೆ, ಮಣ್ಣುಪಾಲಾಗು ,ಅರ್ಧಮರ್ಧ

# ೯. ಹಳ್ಳಿಯ ಆಯಗಾರರು

ಹಳ್ಳಿಯಲ್ಲಿ ಒಕ್ಕಲುತನದ ಉಪಯೋಗಕ್ಕೆ ಹಲವು ಸಾಮಾನುಗಳು ಬೇಕಾಗುವವು. ಅದರಂತೆ ಮನೆಯ ಉಪಯೋಗಕ್ಕೂ ಹಲವು ತರದ ಸಾಮಾನುಗಳ ಅಗತ್ಯವಿದೆ. ಇದಲ್ಲದೆ ಒಬ್ಬನು ಇನ್ನೊಬ್ಬನಿಗೆ ಉಪಯೋಗವಾಗುವ ಕೆಲಸಗಳನ್ನು ಮಾಡಬೇಕಾಗುವದು. ಅವೆಲ್ಲವುಗಳನ್ನು ಪ್ರತಿಯೊಬ್ಬನೂ ತಾನೇ ಮಾಡಿಕೊಳ್ಳಲಾರನು; ಆದರೆ ಕೆಲವೊಂದು ಸಾಮಾನುಗಳನ್ನು ಇಲ್ಲವೆ ಕೆಲಸಗಳನ್ನು ಕೆಲವೊಬ್ಬ ಜನರು ಮಾಡುವರು. ಅವರು ಈ ಮೇರೆಗೆ ಪರರಿಗೆ ನೆರವಾಗುವರು. ಅವರಲ್ಲಿ ಕಮ್ಮಾರರು, ಕುಂಬಾರರು, ಬಡಿಗರು, ಹರಿಜನರು, ಹಡಪಿಗರು ಮುಖ್ಯರಾಗಿರುವರು.



ಈತನು ಒಕ್ಕಲುತನಕ್ಕೆ ಬೇಕಾಗುವ ಕುಡ, ಕುಳ, ಕುರ್ಚಿಗೆ, ಕುಡುಗೋಲು, ಗುದ್ದಲಿ,ಸಲಿಕೆ,ಬಳೆ,ಹಳಿ, ಅಚ್ಚು ಮೊದಲಾದವುಗಳನ್ನು ಮಾಡುವನು. ಮನೆಯ ಉಪಯೋಗದ ಈಳಿಗೆ, ಚುಚ್ಚುಗ, ತವಿ, ತಂಡಾಸ, ಸವುಟು, ಕಬ್ಬಿಣಬುಟ್ಟಿ ಮೊದಲಾದವುಗಳನ್ನೂ ಮಾಡುವನು; ತಿದಿಯಿಂದ ಗಾಳಿಯೂದಿ ಕುಲಿಮೆಯನ್ನು ಉರಿಸುವನು; ಅದ್ದಗಣೆಯ ಮೇಲೆ ಕಾಯ್ದ ಕಬ್ಬಿಣವನ್ನಿಟ್ಟು ಸುತ್ತಿಗೆಯಿಂದ ಬಡಿದು ಸಾಮಾನುಗಳನ್ನು ಮಾಡುವನು; ಇವನು ಮೈಮುರಿದು ದುಡಿಯುವವನು. ಇವನಾರು ಹೇಳಬಲ್ಲಿರಾ?



ಇವರು ಒಕ್ಕಲುತನಕ್ಕೆ ಬೇಕಾಗುವ ಕುಂಟೆ, ರಂಟೆ, ಕೂರಿಗೆ, ಚಕ್ಕಡಿ ಮೊದಲಾದವುಗಳನ್ನೂ ಮನೆಯ ಉಪಯೋಗಕ್ಕಾಗಿ ಮಣೆ,ಕಪಾಟು,ಕುರ್ಚಿ, ಮೇಜು, ಪೆಟ್ಟಿಗೆ,ಬಾಗಿಲು ಮೊದಲಾದವುಗಳನ್ನು ಮಾಡುವರು. ಈ ಚಿತ್ರದಲ್ಲಿ ಒಬ್ಬನು ಬಾಚಿಯಿಂದ ಕಟ್ಟಿಗೆ ಕೆತ್ತುವನು; ಮತ್ತೊಬ್ಬನು ಕೊಡತಿಯಿಂದ ಉಳಿಯ ಮೇಲೆ ಹೊಡೆಯುತ್ತಿರುವನು. ಇವರು ನಮಗೆ ಬೇಕಾಗುವ ಅಂದ ಚೆಂದದ ಸಾಮಾನುಗಳನ್ನು ಮಾಡಿಕೊಡುವರು. ಇವರು ಯಾರು?



ಇಗೋ, ಈತನು ನಮಗೆ ಬೇಕಾದ ಗಡಿಗೆ, ಹರಿವಿ, ಹಂಚು, ಬಾನಿ, ಮುಚ್ಚಳ, ಹೂಜೆ, ಕೊಡ ಮುಂತಾದವುಗಳನ್ನು ಮಾಡುತ್ತಾನೆ. ಈತನ ತಿಗರಿಯು ಗರಗರ ತಿರುಗುವದು. ನೋಡ ನೋಡುವಷ್ಟರಲ್ಲಿ ತಿಗರಿಯ ಮೇಲೆ ತರತರದ ಆಕಾರದ ಗಡಿಗೆ ಮಡಿಕೆ ಮೊದಲಾದವುಗಳು ಆಗುವವು. ಅವುಗಳ ಮೇಲೆ ಸುಳವುಗಳನ್ನೂ ತೆಗೆಯುವನು. ಇವನು ಯಾರು ಬಲ್ಲಿರಾ?



ಇಕೋ ಇಲ್ಲಿ ಕುಳಿತವನು ಜನರಿಗೆ ಮೆಟ್ಟಲಿಕ್ಕೆ ಕೆರವುಗಳನ್ನು ಹೊಲಿಯುತ್ತಿರುವನು. ಒಕ್ಕಲುತನದ ಉಪಯೋಗಕ್ಕಾಗಿ ಮಿಣಿ, ಕಣ್ಣಿ, ಬಾರುಕೋಲು, ಕಪ್ಪಲಿ ಮುಂತಾದವುಗಳನ್ನೂ ಮಾಡಿಕೊಡುವನು. ಇವನಾರು?

ನೀಲಪ್ಪನು ಕ್ಷೌರ ಮಾಡುವನು. ಇವನಿಂದ ಜನರು ಕ್ಷೌರ ಮಾಡಿಸಿಕೊಂಡು ಜಳ ಜಳ ಆಗುವರು;

ಮತ್ತು ಚೆಂದ ಕಾಣುವರು. ನೀಲಪ್ಪನು ತನ್ನ ಹೋರೆಗೆ ಬೇಕಾಗುವ ಸಾಮಾನುಗಳನ್ನು ಹಡಪದಲ್ಲಿ ಹಾಕಿಕೊಂಡಿರುವನು. ಇದರಿಂದ ಅವನಿಗೆ ಯಾವ ಹೆಸರು ಬಂದಿದೆ?

ಇವರೆಲ್ಲರು ಮಾಡುತ್ತಿರುವ ಕೆಲಸಕ್ಕಾಗಿ ಮತ್ತು ಇವರಿಂದ ತೆಗೆದುಕೊಂಡ ಸಾಮಾನುಗಳಿಗಾಗಿ ಒಕ್ಕಲಿಗರು ಇವರಿಗೆ ಸುಗ್ಗಿಯ ಕಾಲದಲ್ಲಿ ಕಾಳುಕಡಿಗಳನ್ನು ಕೊಡುವರು. ಇದಕ್ಕೆ 'ಆಯ' ಎಂದು ಅನ್ನುವರು. ಆದದರಿಂದ ಇವರಿಗೆ ಆಯಗಾರರು ಎಂಬ ಹೆಸರು ಬಂದಿದೆ.

ಒಬ್ಬನು ಒಂದು ಕೆಲಸ ಮಾಡಿಕೊಟ್ಟರೆ, ಅವನಿಗಾಗಿ ಇನ್ನೊಬ್ಬನು ಮತ್ತೊಂದು ಕೆಲಸ ಮಾಡುವನು. ನಾವು ಪರರಿಗಾಗಿ ಕೆಲವು ಸಾಮಾನುಗಳನ್ನು ಮಾಡಿದರೆ, ಪರರು ನಮಗಾಗಿ ಕೆಲವು ಸಾಮಾನುಗಳನ್ನು ಮಾಡಿಕೊಡುವರು. ಒಬ್ಬೊಬ್ಬರು ಒಂದೊಂದು ಪದಾರ್ಥವನ್ನು ಒದಗಿಸಿಕೊಡುವ ಈ ಪದ್ಧತಿಯಿಂದ ಬಾಳುವೆಗೆ ಅನುಕೂಲವಾಗುವದು. ಜೀವನವು ಸುಖಮಯವಾಗುವದು.

ಹೀಗೆ ಒಬ್ಬರು ತಮ್ಮ ಒಂದು ವಸ್ತುವನ್ನು ಮತ್ತೊಬ್ಬರಿಗೆ ಕೊಟ್ಟು ಅವರಿಂದ ತಮಗೆ ಬೇಕಾದ ಮತ್ತೊಂದು ವಸ್ತುವನ್ನು ಇಸಕೊಳ್ಳುವ ಪದ್ಧತಿಗೆ ವಿನಿಮಯವೆಂದು ಅನ್ನುವರು. ಈ ವಿನಿಮಯ ಪದ್ಧತಿಯಿಂದ ಜನರಲ್ಲಿ ಪರಸ್ಪರ ಸಹಕಾರ, ಬಂಧುತ್ವ, ಪ್ರೇಮ ಇವು ಬೆಳೆದು ಬಂದಿವೆ. ಬರಬರುತ್ತ ತಮಗೆ ಬೇಕಾದ ವಸ್ತುವಿಗಾಗಿ ಹಣವನ್ನು ಕೊಡುವ ವಾಡಿಕೆ ಬಂದಿತು. 'ಆಯ' ಪದ್ಧತಿಯು ಅಳಿಯತೊಡಗಿದೆ; ಆದರೂ ಎಷ್ಟೋ ಹಳ್ಳಿಗಳಲ್ಲಿ ಈಗಲೂ ಈ ಪದ್ಧತಿಯು ಬಳಕೆಯಲ್ಲಿದೆ.

**ಅಭ್ಯಸನಗಳು:—**

೧. ಹಳ್ಳಿಯ ಆಯಗಾರರು ಯಾರು?

೨. ಆಯವೆಂದರೇನು?

೩. ಬಡಿಗನು ಯಾವ ಯಾವ ಸಾಮಾನುಗಳನ್ನು ಮಾಡುವನು?

೪. ಕಮ್ಮಾರನು ಯಾವ ಯಾವ ಸಾಮಾನುಗಳನ್ನು ಮಾಡುವನು?

೫. ಒಕ್ಕಲಿಗರು ಆಯವನ್ನು ಯಾವಾಗ ಕೊಡುವರು?

ಕೆಳಗೆ ಕೊಟ್ಟ ಶಬ್ದಗಳ ಗುಂಪುಗಳಲ್ಲಿ ಒಂದು ಶಬ್ದವು ತಪ್ಪಿ ಸೇರಿದೆ ಅದನ್ನು ಹುಡುಕಿರಿ:

| | | |
|---|---|---|
| ಹಡಪಿಗ | ಜೋಳ | ಕುಂಟಿ |
| ಕುಂಬಾರ | ಗುಲಾಬಿ | ಕೂರಿಗೆ |
| ಒಕ್ಕಲಿಗ | ಅಕ್ಕಿ | ಕಪ್ಪಲಿ |
| ಬಡಿಗ | ಗೋದಿ | ತಿಗರಿ |

# ೧೦. ತಾಯಿ

ತಾಯಿ ದೇವರೆಂದು ವೇದ
ಬಾಯಿ ಬಿಟ್ಟು ಹೇಳುತಿಹುದು
ತಾಯಿ ದೇವರೆಂದು ಹಿರಿಯ-
ರೆಲ್ಲರರಿವರು;
ತಾಯಿ ದೇವರೆಂದು ತಿಳಿದ-
ರೆಲ್ಲರೊರೆವರು ॥ ೧ ॥

ಮನೆಯೆ ಮೊದಲ ಪಾಠಶಾಲೆ,
ಜನನಿ ತಾನೆ ಮೊದಲ ಗುರುವು,
ಜನನಿಯಿಂದ ಪಾಠ ಕಲಿತ
ಜನರು ಧನ್ಯರು;
ಘನತೆಯಿಂದಲವರು ಬಾಳ್ವ
ರೆನುತ ನುಡಿವರು ॥ ೨ ॥

ಹೊಟ್ಟೆಯಲ್ಲಿ ಹೊತ್ತು ತಾಯಿ,
ಬೆಟ್ಟದಷ್ಟು ಕಷ್ಟವನ್ನು
ಗಟ್ಟಿತನದಿ ತಾಳ್ವಳಲ್ತೆ;
ಕಂದಗೋಸುಗ
ಬಿಟ್ಟು ಸುಖವ ತಾಳ್ವಳವಳು
ಬಂದ ದುಃಖವ ॥ ೩ ॥

ಕಂದ ಬಳಲಿ ಬಂದನೆಂದು
ನೊಂದುಕೊಂಡು ಬೇಗ ಮಮತೆ-

ಯಿಂದ ನಗುತ ನಗಿಸುತಮೃತ-
ಬಿಂದುವೆರೆವಳು;
ಬೆಂದ ಮನದ ಬೇಗೆಯುಳಿಸು-
ತಂದಗೊಳಿಪಳು || ೪ ||

ಪಡೆದ ತಾಯಿ ಜನುಮವಿತ್ತ
ಪೊಡವಿಯೆಂಬವೆರಡು ಸಗ್ಗ-
ದೆಡೆಗೆ ಮಿಗಿಲು; ಸರ್ವಸಾಧು
ವರರು ಜಗದಲಿ
ಬಿಡುವರೆಲ್ಲವನ್ನಿವಕ್ಕೆ
ಪರಮ ಹರ್ಷದಿ || ೫ ||

ತಾಯಿ ಮಾತಿಗಾಗಿ ರಾಮ
ರಾಯತನವ ತೊರೆದು ನಡೆದ
ತಾಯ ಸೆರೆಯೆ ಬಿಡಿಸೆ ಕೃಷ್ಣ
ಗೊಲ್ಲನಾದನು;
ತಾಯ ಮಾತ ನಡೆಸೆ ಕರ್ಣ
ಬಿಲ್ಲ ತೊರೆದನು || ೬ ||

ಮಾತೆಗಾಗಿ—ತಮ್ಮ ದೇಶ
ಮಾತೆಗಾಗಿ—ಸಕಲ ರಾಜ-
ಪೂತರಸುವ ತೊರೆದರಂದು
ರಣದ ಕಣದಲಿ;
ಖ್ಯಾತಿವೆತ್ತು ಮೆರೆವರಿಂದು
ಮಣಿಗಳಂದದಿ || ೭ ||

**ಅಭ್ಯಸನಗಳು:—**

೧. ತಾಯಿಯೇ ದೇವರೆಂದು ಯಾರು ಯಾರು ಹೇಳಿದರು?
೨. ಮಗುವಿನ ಮೊದಲ ಪಾಠಶಾಲೆ ಯಾವದು? ಮೊದಲ ಗುರು ಯಾರು?
೩. ಮಗುವಿಗಾಗಿ ತಾಯಿ ಏನೇನು ಮಾಡುವಳು?
೪. ಮಗು ಹಸಿದು ಬಂದಾಗ ತಾಯಿ ಏನು ಮಾಡುವಳು?
೫. ಸ್ವರ್ಗಕ್ಕಿಂತಲೂ ಮಿಗಿಲಾದವುಗಳು ಯಾವವು?
೬. ತಾಯಿ ಮಾತಿಗಾಗಿ ಯಾರು ಯಾರು ಏನೇನು ಮಾಡಿದರು?
೭. ಜಗತ್ತಿನಲ್ಲಿ ಎಂಥವರು ಖ್ಯಾತಿವೆತ್ತು ಮೆರೆಯುವರು?

# ೧೧. ಹೊಯ್ಸ




ಮಕ್ಕಳಿರಾ, ಮೇಲಿನ ಚಿತ್ರವನ್ನು ನೋಡಿದಿರಾ? ಎಷ್ಟು ದೊಡ್ಡ ಹುಲಿ ಅದು! ಹೇಗೆ ಬಾಯಿ ತೆರೆದಿದೆ? ಆ ಶೂರನು ಯಾರು? ಎಷ್ಟು ಗಟ್ಟಿಗ! ಮೇಲೆಬೀಳುತ್ತಿರುವ ಹುಲಿಗೆ ಅಂಜದೆ ಅದರಬಾಯಲ್ಲಿ ಏನೋ ತಿವಿದಿದ್ದಾನಲ್ಲ? ಆಹಹ! ಹುಲಿ ಈಗ ನೆಲಕ್ಕೆ ಬೀಳುತ್ತಲಿರವದು.

ಈ ಚಿತ್ರದಲ್ಲಿ ಕಾಣುವ ಸಂಗತಿ ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ನಡೆದದ್ದು. ಈಗಿನ ಮೈಸೂರ ಸಂಸ್ಥಾನದ ಕಡೂರ ಜಿಲ್ಲೆಯಲ್ಲಿ ಅಂಗಡಿ ಎಂಬದೊಂದು ಊರು ಅದೆ. ಆಗ ಈ ಊರಿಗೆ 'ಶಶಕಪುರ' ಎಂಬ ಹೆಸರು ಇತ್ತು. ಊರಿಗೆ ಹೊಂದಿ ದೊಡ್ಡ ಅಡವಿಯಿತ್ತು. ಆ ಅಡವಿಯಲ್ಲಿ ಹುಲಿ, ತೋಳ, ಚಿರ್ಚು ಮೊದಲಾದ ಹಿಂಸ್ರ ಪಶುಗಳು ಬಹಳ ಇದ್ದವು. ಅವುಗಳಿಂದ ಊರಿನ ಜನರಿಗೂ, ದನಗಳಿಗೂ ಬಹಳ ಉಪದ್ರವವಾಗುತ್ತಿತ್ತು.

ಊರ ಹೊರಗೆ ಜೈನರ 'ವಾಸಂತೀ' ದೇವಿಯ ಗುಡಿ ಇತ್ತು. ಅದರೊಳಗೆ 'ಸುದತ್ತಮುನಿ' ಎಂಬ ಜೈನ ಸಂನ್ಯಾಸಿ ಇರುತ್ತಿದ್ದನು.

ಅವನು ಬಹು ಜ್ಞಾನವಂತನು. ಒಳ್ಳೆಯ ನಡತೆಯುಳ್ಳವನು. ಯಾವಾಗಲೂ ಧರ್ಮವಿಚಾರದಲ್ಲಿ ಕಾಲಕಳೆಯುವವನು.

ಈ ಶಶಕಪುರದಲ್ಲಿ 'ಸಳ' ಎಂಬ ಹೆಸರಿನ ಒಬ್ಬ ಪ್ರಾಯದ ಹುಡುಗನಿದ್ದನು. ಆತನು ಯದುವಂಶದವನಂತೆ. ದೊಡ್ಡ ಮನೆತನದವನು. ಬಹಳ ಗಟ್ಟಿಗ. ಆತನಿಗೆ ಬೇಟೆಯಾಡುವುದರಲ್ಲಿ ಬಹಳ ಹರುಷ. ಆಗಾಗ ಅಡವಿಗೆ ಬೇಟೆಯಾಡಲಿಕ್ಕೆ ಹೋಗುವನು. ಹುಲಿ ಮೊದಲಾದ ಕ್ರೂರ ಪಶುಗಳನ್ನು ಕೊಲ್ಲುವನು. ಅವುಗಳ ಕಾಟವನ್ನು ಕಡಿಮೆ ಮಾಡುವನು.

ಸಳನಿಗೆ ಧರ್ಮದ ಮೇಲೆ ಬಹಳ ಪ್ರೀತಿ. ತನಗೆ ಅನುಕೂಲವಾದಾಗ ವಾಸಂತೀ ದೇವಿಯ ಗುಡಿಗೆ ಹೋಗುವನು; ಸುದತ್ತ ಮುನಿಗಳ ಉಪದೇಶವನ್ನು ಆಲಿಸುವನು. ಒಂದು ದಿನ ಸಳನು ಎಂದಿನಂತೆ, ಬೇಟೆಗಾಗಿ ಅಡವಿಗೆ ಹೋದನು. ನೂರಾರು ಹಿಂಸ್ರ ಪಶುಗಳನ್ನು ಕೊಂದು ಹಾಕಿದನು. ಸಳನ ಆರ್ಭಟಕ್ಕೆ ಉಳಿದ ಪಶುಗಳು ಅಂಜಿದವು. ಹುಲಿಗಳು ಗವಿಯನ್ನು ಸೇರಿದವು. ಕಾಡ ಮಿಕಗಳು ಅಡವಿಯೊಳಗೆ ಮಾಯವಾದವು. ತೋಳ, ಕಾಡಕೋಣ, ಚಿರ್ಚಿ ಮೊದಲಾದವುಗಳೆಲ್ಲ ದಿಕ್ಕುಗೆಟ್ಟು ಓಡಿಹೋದವು.

ಸಳನು ಬೇಟೆಯ ಆಯಾಸದಿಂದ ಬಳಲಿ ವಾಸಂತೀ ದೇವಿಯ ಗುಡಿಗೆ ಬಂದನು. ಸುದತ್ತಮುನಿಯು ಆತನನ್ನು ಉಪಚರಿಸಿದನು. ಸಳನ ದಣಿವು ಆರಿತು. ಆತನು ಗುಡಿಯ ಅಂಗಳದಲ್ಲಿ ಸುದತ್ತ ಮುನಿಯ ಉಪದೇಶವನ್ನು ಕೇಳುತ್ತ ಕುಳಿತುಕೊಂಡನು. ಆಗ ಒಂದು ಹೆಬ್ಬುಲಿಯು ಆರ್ಭಟಿಸುತ್ತ ಅಲ್ಲಿಗೆ ಬಂದಿತು. ಗುಡಿಯೊಳಗಿದ್ದ ಜನರು ಬೆದರಿ ಹೌಹಾರಿದರು. ಆಗ ಸುದತ್ತ ಮುನಿಯು ತನ್ನ ಕೋಲನ್ನು ಸಳನ ಎದುರಿಗೆ ಚೆಲ್ಲಿ 'ಹೊಯ್ ಸಳ' (ಸಳನೇ ಹೊಡೆ) ಎಂದು ಹೇಳಿದನು. ಸಳನು ಸ್ವಲ್ಪವೂ ಹೆದರದೆ ಟೊಂಕಕ್ಕೆ ಕಟ್ಟಿದ ಕಠಾರಿಯನ್ನು ಹಿರಿದು, ಹುಲಿಯ ತೆರೆದ ಬಾಯೊಳಗೆ ತಿವಿದನು. ಮುನಿಯು ಕೊಟ್ಟ ಕೋಲಿನಿಂದ ನಾಲ್ಕಾರು ಪೆಟ್ಟು ಹಾಕಿದನು. ಹುಲಿ ನೆಲಕ್ಕೆ ಉರುಳಿತು. ನೆತ್ತರ ಕಾರಿ ಪ್ರಾಣಬಿಟ್ಟಿತು.

ಸುದತ್ತ ಮುನಿ ಸಳನ ದಿಟ್ಟತನಕ್ಕೆ ಮೆಚ್ಚಿ ಅವನಿಗೆ ಆಶೀರ್ವಾದ ಮಾಡಿದನು. "ನೀನು ರಾಜ್ಯವನ್ನು ಕಟ್ಟು" ಎಂದು ಅಪ್ಪಣೆ ಕೊಟ್ಟನು. ಮುಂದೆ ಸಳನು ಶಶಕಪುರದ ಸುತ್ತಲಿನ ಹಳ್ಳಿಗಳನ್ನು ಗೆದ್ದುಕೊಂಡನು. ಬರಬರುತ್ತ ಹೆಚ್ಚು ಹೆಚ್ಚು ಪ್ರದೇಶಗಳನ್ನು ಗೆದ್ದು ಒಂದು ರಾಜ್ಯವನ್ನು ಕಟ್ಟಿದನು. ಬಹುಕಾಲ ಆಳಿದನು. ಸುದತ್ತ ಮುನಿಯು ಆಡಿದ 'ಹೊಯ್‌ಸಳ' ಎಂಬ ನುಡಿಯು ಆತನ ಮನೆತನದ ಹೆಸರು ಆಯಿತು. ಹೊಯ್ಸಳರ ರಾಜ್ಯವು ಸುಮಾರು ಮೂರು ನೂರು ವರುಷ ನಡೆಯಿತು. ಮೈಸೂರ ದೇಶದಲ್ಲಿ ಇರುವ 'ದ್ವಾರ ಸಮುದ್ರ' ಅಥವಾ 'ಹಳೇಬೀಡು' ಇವರ ರಾಜಧಾನಿಯಾಗಿತ್ತು. ಹೊಯ್ಸಳರು ಶಿಲ್ಪಕಲೆಗೂ ಕನ್ನಡ ಸಂಸ್ಕೃತಿಗೂ ಬಹಳ ಪ್ರೋತ್ಸಾಹ ಕೊಟ್ಟರು. ಇವರ ಕಾಲದಲ್ಲಿ ಕನ್ನಡ ಲಿಪಿಯು ಸುಂದರವಾಗಿತ್ತು. ಇವರು ಕನ್ನಡ ನಾಡಿನ ಕೀರ್ತಿಯನ್ನು ಬಹು ವಿಧವಾಗಿ ಬೆಳೆಸಿದರು. ಹಳೇಬೀಡ ಚೆನ್ನಕೇಶವ ದೇವಾಲಯವು ಬಹಳ ಹೆಸರಾದುದು. ಶಿಲ್ಪಕಲೆಯಲ್ಲಿ ಅದನ್ನು ಸರಿಗಟ್ಟುವ ಗುಡಿಯು ಇನ್ನೊಂದಿಲ್ಲ. ಈ ವಂಶದ 'ಬಿಟ್ಟಿದೇವ' ಅಥವಾ 'ವಿಷ್ಣುವರ್ಧನ' ಎಂಬವನು ಹನ್ನೆರಡನೆಯ ಶತಮಾನದಲ್ಲಿ ಅದನ್ನು ಕಟ್ಟಿಸಿದನು. ಮೇಣದಿಂದಲೂ ಕೂಡ ಮಾಡಲು ಬಾರದಂಥ ಕಲ್ಲಿನಲ್ಲಿ ಕೆತ್ತಿದ ನಯವಾದ ಮತ್ತು ಸುಂದರವಾದ ಗೊಂಬೆಗಳು ಈ ದೇವಾಲಯದಲ್ಲಿ ಉಂಟು.

**ಅಭ್ಯಸನಗಳು:—**

೧. ಸಳನ ಹುಟ್ಟಿದ ಊರು ಯಾವದು?

೨. ಆತನಿಗೆ ದಿಟ್ಟತನವನ್ನು ತೋರುವ ಪ್ರಸಂಗವು ಯಾವದು ಒದಗಿತು?

೩. ಸುದತ್ತಮುನಿಗಳು ಸಳನಿಗೆ ಏನೆಂದು ಹೇಳಿದರು?

೪. ಸಳನು ಆ ಕ್ಷಣಕ್ಕೆ ಏನು ಮಾಡಿದನು?

೫. ಸುದತ್ತಮುನಿಗಳು ಸಳನಿಗೆ ಏನೆಂದು ಆಶೀರ್ವಾದ ಮಾಡಿದರು?

೬. ಸಳನ ಮನೆತನಕ್ಕೆ ಹೊಯ್ಸಳ ಎಂಬ ಅಡ್ಡ ಹೆಸರು ಹೇಗೆ ಬಿದ್ದಿತು?

೭. ಹೊಯ್ಸಳ ಅರಸರ ರಾಜಧಾನಿ ಯಾವದು?

೮. ಚನ್ನಕೇಶವ ದೇವಾಲಯವನ್ನು ಯಾರು ಕಟ್ಟಿಸಿದರು?

೯. ಹೌದು, ಅಲ್ಲ ಹೇಳಿರಿ:

ಅ) ಸಳನ ಊರು ಶಶಕಪುರ.
ಆ) ಸಳನು ಹುಲಿಯನ್ನು ಕಂಡು ನಡುಗಿದನು.
ಇ) ಸುದತ್ತಮನಿಯು ಸಳನ ಶಿಷ್ಯನು.
ಈ) ಹುಲಿಯು ಸಳನನ್ನು ಕೊಂದಿತು.

# ೧೨ ಹತ್ತಿ



"ಇಂದು ಹತ್ತಿಯ ಹೊಲದ ನಿರೀಕ್ಷಣೆ ಮಾಡುವದಿದೆ" ಎಂದು ವರ್ಗದ ಹಿರಿಯ ಮಣಿಯು ಗುರುಗಳಿಗೆ ನೆನಪುಕೊಟ್ಟನು. 'ಹೌದು. ಈಗ ನಾವು ಅಲ್ಲಿಗೆ ಹೋಗೋಣ' ಎಂದು ಗುರುಗಳು ಹೇಳಿದರು. ಎಲ್ಲ ಬಾಲಕರೂ ಸಾಲಾಗಿ ನಿಂತರು. ಹಿರಿಯ ಮಣಿಯು ಸಾಲಿನ ತುದಿಯ ಮಗ್ಗಲಿಗೆ ನಿಂತು, "ಎಲ್ಲರೂ ಮುಂದೆ ಹೋಗಬೇಕು" ಎಂದು ಅಪ್ಪಣೆ ಕೊಟ್ಟನು. ಎಲ್ಲರೂ ಮುಂದೆ ನಡೆದರು. ಗುರುಗಳೂ ಹಿಂಬಾಲಿಸಿದರು. ಎಲ್ಲರೂ ಸಾಲೆಯ ಸಮೀಪದ ಹತ್ತಿಯ ಹೊಲಕ್ಕೆ ಬಂದರು. ಹೊಲದಲ್ಲಿ ನಡೆದ ಕೆಲಸವನ್ನು ಬಾಲಕರು ನಿರೀಕ್ಷಿಸತೊಡಗಿದರು.

ಗುರು:—ಬಾಲಕರೇ, ಹೂಬಿಸಿಲು ಹತ್ತಿಯ ಹೊಲದ ಮೇಲೆಲ್ಲ ಬಿದ್ದಿದೆ. ಹೊಲಕ್ಕೆ ಹಚ್ಚಡ ಹೊಚ್ಚಿದ ಹಾಗೆ ಕಾಣುತ್ತದೆ. ಈ ನೋಟ ಎಷ್ಟು ಚೆಂದ !

ವಿರೂಪಾಕ್ಷ:—ಗುರುಗಳೇ, ಈ ಹೆಣ್ಣುಮಕ್ಕಳು ಹೊಲದಲ್ಲಿ ಏನು ಮಾಡುತ್ತಿರುವರು ?

ಗುರು:—ಅವರು ಹತ್ತಿಯನ್ನು ಬಿಡಿಸುತ್ತಿರುವರು. ಅಗೋ ನೋಡಿರಿ! ಆ ಹೆಣ್ಣುಮಗಳು ಪೂರ್ಣ ಬಿರಿತ ಕಾಯಿಗಳೊಳಗಿನ ಹತ್ತಿ

ಯನ್ನು ಬಿಡಿಸಿದಳು. ಅರೆ ಬಿರಿತ ಕಾಯಿಗಳನ್ನು ಹಾಗೆಯೇ ಬಿಡುವಳು.

ನಾರಾಯಣ:—ಅವರು ಬಿಡಿಸಿದ ಹತ್ತಿಯನ್ನು ಉಡಿಯಲ್ಲಿ ಯಾಕೆ ಹಾಕಿಕೊಳ್ಳುವರು ? ಕೆಳಗೆ ಯಾಕೆ ಇಡುವದಿಲ್ಲ ?

ವಿರೂಪಾಕ್ಷ:—ಕೆಳಗೆ ಇಟ್ಟರೆ ಹತ್ತಿಯಲ್ಲಿ ಕಸರು ಸೇರುವದು. ಹಾಗೆ ಆಗಬಾರದೆಂದು ಅವರು ತಮ್ಮ ಉಡಿಯಲ್ಲಿ ಹಾಕಿಕೊಳ್ಳುವರು.

ಗುರು:—ಶಾಬಾಶ್, ವಿರೂಪಾಕ್ಷ, ಸರಿಯಾಗಿ ಹೇಳಿದೆ. ಹತ್ತಿಯಲ್ಲಿ ಕಸರು ಕೂಡಬಾರದು. ಈ ತೊಳೆಯನ್ನು ನೋಡಿರಿ. ಇದು ಚೆನ್ನಾಗಿ ಒಡೆದಿಲ್ಲ. ಆ ತೊಳೆಯನ್ನು ನೋಡಿರಿ. ಅದಕ್ಕೆ 'ಅಂಟು ತೊಳೆ' ಅನ್ನುವರು. ಅಲ್ಲಿ ನೋಡಿರಿ, ಅದು ಹುಳಕ ತೊಳೆ. ಇಂಥ ತೊಳೆಗಳಿಂದ ಬಿಡಿಸಿದ ಹತ್ತಿಯನ್ನು ನಮ್ಮ ಹತ್ತಿಯಲ್ಲಿ ಕೂಡಿಸ ಬಾರದು; ಯಾಕಂದರೆ ನಮ್ಮ ಸಾಲೆಯಲ್ಲಿ ಇರುವ ಹತ್ತಿಯು ನೂಲುವ ಹತ್ತಿಯು. ಅಂಟು ತೊಳೆ, ಹುಳಕ ತೊಳೆಗಳಿಂದ ತೆಗೆದ ಹತ್ತಿಯು ಸರಿಯಾಗಿ ಇರುವದಿಲ್ಲ. ಅದರಿಂದ ಒಳ್ಳೆಯ ನೂಲು ಹೊರಡುವದಿಲ್ಲ. ಆ ಹತ್ತಿಯನ್ನು ಪಣತಿಗೆ ಬತ್ತಿ ಮಾಡಲಿಕ್ಕೆ ಉಪಯೋಗಿಸುವರು; ಗಾದಿ ತಲೆದಿಂಬುಗಳೊಳಗೆ ತುಂಬುವರು.

ವಿರೂಪಾಕ್ಷ:—ಅತ್ತ ನೋಡಿರಿ. ಉಡಿಯಲ್ಲಿದ್ದ ಹತ್ತಿಯನ್ನು ಮತ್ತೆ ಒಂದೆಡೆಗೆ ಕೂಡಹಾಕಿ ದೊಡ್ಡ ಗಂಟು ಮಾಡಿದರು.

ನಾರಾಯಣ:—ಈ ಹತ್ತಿಯನ್ನು ಎಲ್ಲಿಗೆ ಒಯ್ಯುವರು? ಮುಂದೆ ಏನು ಮಾಡುವರು ?

ಗುರು:—ಹೊಲದ ಒಡೆಯನ ಮನೆಗೆ ಒಯ್ದು ಕೋಣೆಯಲ್ಲಿ ಇಡುವರು. ಹತ್ತಿಯನ್ನು ಇಲಿಗಳು ಹೊಡಚದಂತೆ ಜತನ ಮಾಡುವರು. ಬಳಿಕ ದೊಡ್ಡ ಅಂಡಿಗೆಗಳಲ್ಲಿ ತುಂಬಿ ವ್ಯಾಪಾರಸ್ಥರಿಗೆ ಇಲ್ಲವೆ ಹತ್ತಿಯ ವ್ಯಾಪಾರದ ಸಂಘಕ್ಕೆ ಕೊಡುವರು. ಅವರು ಗಿರಣಿಯ ಒಡೆಯರಿಗೆ ಮಾರುವರು. ಗಿರಣಿಯಲ್ಲಿ ಹತ್ತಿಯಿಂದ ಅರಳೆ ಮಾಡುವರು. ಬಳಿಕ ನೂಲು ಮಾಡಿ ತರತರದ ಬಟ್ಟೆಗಳನ್ನು ಸಿದ್ಧಗೊಳಿಸುವರು.

ನಮ್ಮ ದೇಶದ ಹತ್ತಿ ಹೆಚ್ಚಾಗಿ ಪರದೇಶಗಳಿಗೆ ಹೋಗುತ್ತಿತ್ತು. ಅಲ್ಲಿಂದ ಬಟ್ಟೆ ಸಿದ್ಧವಾಗಿ ಬರುತ್ತಿತ್ತು. ಇದರಿಂದ ನಮ್ಮ ನೆಯ್ಕಾರರಿಗೆ ಕೆಲಸವು ಕಡಿಮೆಯಾಯಿತು. ನೆಯ್ಕಾರರ ಉದ್ಯೋಗವು ಹಾಳಾಗ ತೊಡಗಿತು. ಬಟ್ಟೆಗಾಗಿ ಪರದೇಶಗಳಿಗೆ ನಮ್ಮ ಹಣವು ಹೋಗುತ್ತಿತ್ತು. ಇದನ್ನು ತಡೆಯುವದಕ್ಕಾಗಿ ನಾವು ಖಾದಿ ಬಟ್ಟೆ ತೊಡಬೇಕೆಂದು ಗಾಂಧಿಜಿಯವರು ಬೋಧಿಸಿದರು. ನಮ್ಮ ಹತ್ತಿಯನ್ನೇ ಉಪಯೋಗಿಸಿ, ಚರಕದಿಂದ ನಾವೇ ನೂಲಬೇಕು; ನಮ್ಮ ನೂಲಿನಿಂದ ನೆಯ್ದು ಬಟ್ಟೆ ಸಿದ್ಧಗೊಳಿಸಬೇಕು. ಇದು ನಮ್ಮ ಬಟ್ಟೆ, ಖಾದಿ ಬಟ್ಟೆ ಎಂದು ಅವರು ತಿಳಿಸಿಕೊಟ್ಟರು. ಈಗ ಎಷ್ಟೋ ಜನರು ಖಾದಿ ಬಟ್ಟೆ ಧರಿಸುತ್ತಿರುವರು. ನಾವು ಖಾದಿ ಬಟ್ಟೆ ತೊಡುವದರಿಂದ ನಮ್ಮ ನೆಯ್ಕಾರರಿಗೆ ಉದ್ಯೋಗವು ದೊರಕುವದು, ಹತ್ತಿಯಿಂದ ಬಟ್ಟೆಯಾಗುವವರೆಗೆ ದುಡಿಯುವ ಎಲ್ಲ ಜನರಿಗೂ ಉದ್ಯೋಗವು ಸಿಗುವದು; ಅಲ್ಲದೆ ನಾವು ಬಟ್ಟೆಗೆ ಕೊಟ್ಟ ಹಣವು ನಮ್ಮ ಜನರೊಳಗೇ ಹಂಚಿಹೋಗುವದು. ನಮ್ಮ ದೇಶದಲ್ಲಿ ಆದ ವಸ್ತುಗಳ ಮೇಲೆ ನಮ್ಮ ಪ್ರೀತಿ ಬೆಳೆದರೆ ನಮ್ಮ ದೇಶವು ಸಿರಿವಂತ ದೇಶವಾಗುವದು. ಈ ರೀತಿ ಗಾಂಧಿಜಿಯವರು ಜನರಿಗೆ ಬೋಧಮಾಡಿ, ಜನರಲ್ಲಿ ಖಾದಿ ಬಟ್ಟೆ ಮತ್ತು ಸ್ವದೇಶ ವಸ್ತು ಇವುಗಳಲ್ಲಿ ಪ್ರೀತಿಯನ್ನು ಹೆಚ್ಚಿಸಿದರು.

"ಬಾಲಕರೇ, ಹೊತ್ತಾಯಿತು, ಸಾಲೆಗೆ ಹೋಗೋಣ"

ಎಲ್ಲರೂ ಸಾಲಾಗಿ ನಿಂತರು; ಹಾಡುತ್ತ ಸಾಲೆಗೆ ನಡೆದರು.

**ಅಭ್ಯಾಸನಗಳು:—**

೧. ಆ ಹೆಣ್ಣುಮಕ್ಕಳು ಎಂಥ ಕಾಯಿಯೊಳಗಿಂದ ಹತ್ತಿಯನ್ನು ಬಿಡಿಸುತ್ತಿದ್ದರು?

೨. ಎಂಥ ಕಾಯಿಗಳನ್ನು ಹಾಗೆಯೇ ಬಿಡುತ್ತಿದ್ದರು?

೩. ನಮ್ಮ ನೆಯ್ಕಾರರ ಉದ್ಯೋಗವು ಯಾಕೆ ಕಡಿಮೆಯಾಯಿತು?

೪. ಖಾದಿ ಬಟ್ಟೆ ಎಂದು ಯಾತಕ್ಕೆ ಅನ್ನಬೇಕು?

೫. ಗಾಂಧಿಜಿಯವರು ಜನರಿಗೆ ಏನು ಬೋಧ ಮಾಡಿದರು?

೬. ಹತ್ತಿಯಿಂದ ಬಟ್ಟೆಯಾಗುವವರೆಗೆ ಯಾರು-ಯಾರು ದುಡಿಯುವರು?

೭. ಕೆಳಗಿನ ಶಬ್ದಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ:
ನಿರೀಕ್ಷಿಸು, ಹೂಬಿಸಿಲು, ಹೊಂಬಣ್ಣ, ಜತನ, ಧರಿಸು

# ೧೩. ಸಿಂಹವೂ ಇಲಿಯೂ



ಒಂದು ದಿನ ಒಂದು ಸಿಂಹವು ಬೇಟೆಯ ಸಲುವಾಗಿ ಹೊತ್ತು ಮುಳುಗಿ ಹೊರಟಿತು. ಎಷ್ಟು ಹುಡುಕಿದರೂ ಒಂದೂ ಬೇಟೆ ಕಣ್ಣಿಗೆ ಬೀಳಲಿಲ್ಲ. ಅಷ್ಟರಲ್ಲಿ ಚಂದ್ರನು ಮೂಡಿದ್ದರಿಂದ ಕತ್ತಲೆ ಹರಿದು ನಾಲ್ಕೂಕಡೆ ಬೆಳಕು ಆಯಿತು. ಆಗ ಸಿಂಹವು— "ನಾನು ಹೀಗೆ ತಿರುಗುವದು ಸರಿಯಲ್ಲ. ಈ ಗಿಡಗಳ ಹತ್ತರ ಅಡಗಿಕೊಂಡು ಕುಳಿತರೆ ನನ್ನ ಕೆಲಸವಾಗಬಹುದು" ಎಂದು ಆಲೋಚಿಸಿ ಕುಳಿತಿತು.

ಅಲ್ಲಿಯೇ ಕೆಲವು ಇಲಿಗಳು ಮನೆ ಮಾಡಿಕೊಂಡು ಇದ್ದವು. ಕುಳಿತ ಸಿಂಹವನ್ನು ಲೆಕ್ಕಿಸದೆ ಅವು ಒದರುತ್ತ ಓಡಾಡಹತ್ತಿದವು.

ಆಗ ಸಿಂಹವು ಸಿಟ್ಟಿಗೆದ್ದು— "ಎಲೋ, ತಿಳಿಗೇಡಿಗಳಾದ ಅಲ್ಪ ಜಂತುಗಳೇ, ನಾನು ಯಾರೆಂದು ವಿಚಾರ ಮಾಡದೆ ಮೈಸೊಕ್ಕಿನಿಂದ ನನ್ನ ಸಮೀಪಕ್ಕೆ ಬಂದು ಉಪದ್ರವ ಕೊಡುತ್ತೀರಾ?" ಎಂದು ಗರ್ಜಿಸಿ ಅವುಗಳನ್ನು ಕೊಲ್ಲಬೇಕೆಂದು ಹಿಡಿಯ ಹೋಗಲು, ಒಂದು ಇಲಿಯು ಮಾತ್ರ ಅದರ ಪಂಜರದೊಳಗೆ ಸಿಕ್ಕಿತು. ಉಳಿದ ಇಲಿಗಳು ಅಂಜಿ ತಮ್ಮ ಗುದ್ದಿನೊಳಗೆ ಹೊಕ್ಕವು. ಆ ಇಲಿಯು ಗದಗದನೆ ನಡುಗುತ್ತ ಸಿಂಹಕ್ಕೆ ಕೈಮುಗಿದು- "ಎಲೈ ವನರಾಜನೇ, ನನ್ನಿಂದ ಇದೊಂದು ತಪ್ಪಾಯಿತು: ತಾಳಬೇಕು. ಪರಾಕ್ರಮದಿಂದ ನೀನು ಯಾವತ್ತು ಮೃಗಗಳಿಗೆ ಒಡೆಯನಾಗಿರುತ್ತೀ. ಹೀಗಿದ್ದು ನನ್ನಂಥ ಸಣ್ಣ ಪ್ರಾಣಿಯನ್ನು ಕೊಲ್ಲುವದು ನಿನಗೆ ಎಷ್ಟು ಮಾತ್ರವೂ ಸರಿಯಲ್ಲ. ದಯಮಾಡಿ ಬಿಡು, ಕೊಲ್ಲಬೇಡ" ಎಂದು ಹೇಳಿಕೊಂಡಿತು. ಸಿಂಹವು ಕನಿಕರಬಟ್ಟು ಅದನ್ನು ಬಿಟ್ಟುಬಿಟ್ಟಿತು.

ಇಲಿಯು ಸಂತೋಷದಿಂದ ಸಿಂಹಕ್ಕೆ ನಮಸ್ಕಾರ ಮಾಡಿ — "ಮಹಾರಾಯಾ, ನೀನು ನನಗೆ ಈ ಹೊತ್ತು ಜೀವದಾನ ಮಾಡಿದೆ. ಇದನ್ನು ನಾನು ಎಂದಿಗೂ ಮರೆಯುವದಿಲ್ಲ. ಹೊತ್ತು ಬಂದಾಗ ನಿನ್ನ ಉಪಕಾರವನ್ನು ತೀರಿಸುವೆನು" ಎಂದು ನುಡಿಯಿತು. ಈ ಮಾತನ್ನು ಕೇಳಿ ಸಿಂಹವು ನಕ್ಕು-"ಎಲಾ, ನಿನ್ನಂಥ ಅಲ್ಪ ಜಂತುವಿನಿಂದ ನನಗೇನು ಉಪಕಾರವಾದೀತು? ಒಳ್ಳೆಯದು, ಇರಲಿ ಹೋಗು" ಎಂದು ಹೇಳಿ. ಬೇಟೆಯ ಸಲುವಾಗಿ ಬೇರೆ ಕಡೆಗೆ ಹೋಯಿತು. ಇತ್ತ ಇಲಿಯು ತನ್ನ ಹೋರನ್ನು ಸೇರಿತು.

ಕೆಲವು ದಿನಗಳ ಮೇಲೆ ಒಂದು ದಿನ ಆ ಇಲಿಯು ಆಹಾರದ ಸಲುವಾಗಿ ತಿರುಗಾಡುತ್ತಿರುವಾಗ ಒಮ್ಮಿಂದೊಮ್ಮೆ ಮುಂಗಾರಿಯ ಗುಡುಗಿನಂಥ ಗರ್ಜನೆಯನ್ನು ಕೇಳಿತು. ಅದು ಗಾಬರಿಯಾಗಿ ಅತ್ತಿತ್ತ ನೋಡುವಷ್ಟರಲ್ಲಿ ತನಗೆ ಮೊದಲು ಉಪಕಾರಮಾಡಿದ ಸಿಂಹವು ಬೇಡನ ಬಲೆಯೊಳಗೆ ಸಿಕ್ಕು ಚಡಪಡಿಸುತ್ತಿರುವದನ್ನು ಕಂಡಿತು. ಕೂಡಲೆ ಓಡುತ್ತ ಹೋಗಿ, ಬಲೆಯ ಹಗ್ಗಗಳನ್ನು ತನ್ನ ಹದಸವಾದ ಹಲ್ಲುಗಳಿಂದ ಕಡಿದು ಕತ್ತರಿಸಿತು. ಸಿಂಹವು ಬಲೆಯಿಂದ ಹೊರಬಿದ್ದಿತು. ಅದು ಇಲಿಗೆ—"ಎಲೋ, ಜೀವದ ಗೆಳೆಯನೆ, ನೀನು ಬಲವಿಲ್ಲದವ ನಾದರೂ ಒಳ್ಳೆಯ ಹೊತ್ತಿಗೆ ಬಂದು ನನ್ನನ್ನು ಪಾರು ಮಾಡಿದೆ. ಅಲ್ಪ



ಜನರ ಸಹಾಯದಿಂದಾದರೂ ಒಮ್ಮೊಮ್ಮೆ ದೊಡ್ಡ ಕೆಲಸಗಳು ಕೈಗೂಡುತ್ತವೆಂಬ ಮಾತನ್ನು ಇಂದು ನಾನು ಮನಗಂಡೆನು. ನನ್ನ ಮೇಲೆ ನಿನ್ನ ಉಪಕಾರವು ಬಹಳವಾಯಿತು" ಎಂದು ನುಡಿದು ತನ್ನ ಗವಿಯ ಹಾದಿಯನ್ನು ಹಿಡಿಯಿತು.

**ಅಭ್ಯಸನಗಳು:—**

೧) ಸಿಂಹವು ಎಲ್ಲಿ ಅಡಗಿಕೊಂಡಿತ್ತು?
೨) ಇಲಿಯು ಸಿಂಹಕ್ಕೆ ಏನೆಂದು ಹೇಳಿತು?
೩) ಇಲಿಯ ಮಾತಿಗೆ ಸಿಂಹವು ಏಕೆ ನಕ್ಕಿತು?
೪) ಇಲಿಯು ಸಿಂಹಕ್ಕೆ ಹೇಗೆ ಸಹಾಯ ಮಾಡಿತು?
೫) ಸಿಂಹವು ಕೊನೆಗೆ ಏನು ಅಂದಿತು?

# ೧೪  ಹಕ್ಕಿಯ ಜಗತ್ತು



ಮೊದಲು ಪುಟ್ಟ ಮನೆಯೊಳಿದ್ದೆ
ಸುಖದ ನಿದ್ದೆಯಿಂದಲೆದ್ದೆ
ಜಗವು ನನಗೆ ತೋರಿತಂದು
'ಸಣ್ಣ ನೀಲ ಬುರುಡೆ' ಯೆಂದು ॥೧॥

ಬಳಿಕ ಬೇರೆ ಮನೆಗೆ ಬಂದೆ;
ನೋಡಿ ಮುಂದೆ ಮನದಲೆಂದೆ -
'ಜಗವು ಹುಲ್ಲಿನೊಂದು ಗೂಡು'
ಅದಕೆ ತಾಯ ರೆಕ್ಕೆ ಮಾಡು ॥೨॥

ಒಂದು ದಿವಸ ರೆಕ್ಕೆ ಬಡಿದೆ
ಹೊರಗೆ ನಡೆದೆ, ಹೀಗೆ ನುಡಿದೆ:
'ಜಗವು ಎಲೆಗಳೊಂದು ಗೂಡು'
ಕುರುಡನಿದ್ದೆ ಹೌದು ನೋಡು ॥೩॥

ಕೊನೆಗೆ ಇರದೆ ರೆಂಬೆಯಲ್ಲಿ
ಗಗನದಲ್ಲಿ ಹಾರುವಲ್ಲಿ
ಜಗವನೇನನೆಂಬೆ ನಾನು
ತಿಳಿಯದೆನಗೆ ಹೇಳು ನೀನು || ೪ ||

ಅಭ್ಯಸನಗಳು:—

೧. ಮೊದಲು ಹಕ್ಕಿಗೆ ಜಗತ್ತು ಹೇಗೆ ಕಂಡಿತು?
೨. ಗೂಡಿನಲ್ಲಿದ್ದಾಗ ಹಕ್ಕಿಗೆ ಜಗವು ಹೇಗೆ ಕಂಡಿತು?
೩. ಗೂಡಿನಿಂದ ಹೊರಗೆ ಬಂದಾಗ ಹಕ್ಕಿಗೆ ಜಗತ್ತು ಹೇಗೆ ಕಂಡಿತು?
೪. ಹಕ್ಕಿ ದೊಡ್ಡದಾಗಿ ಆಕಾಶದಲ್ಲಿ ಹಾರಾಡುವಾಗ ಅದಕ್ಕೆ ಜಗತ್ತಿನ ವಿಷಯವಾಗಿ ಏನೆನಿಸಿತು?

## ೧೫. ಬನಶಂಕರಿ

ಬನಶಂಕರಿಯ ದೇವಸ್ಥಾನವು ವಿಜಾಪುರ ಜಿಲ್ಹೆಯ ಬಾದಾಮಿ ತಾಲೂಕಿನಲ್ಲಿದೆ. ಇದು ಬಾದಾಮಿಯಿಂದ ಚೊಳಚಗುಡ್ಡದ ಮಾರ್ಗದಲ್ಲಿ ಸುಮಾರು ಮೂರು ಮೈಲು ಅಂತರದ ಮೇಲೆ ಅದೆ. ಗುಡಿಯನ್ನು ಕರಿ ಕಲ್ಲಿನಿಂದಲೇ ಕಟ್ಟಿದ್ದಾರೆ. ತೊಲೆ ಕಂಬಗಳು ಸಹ ಕಲ್ಲಿನವು. ಗುಡಿಯನ್ನು ಕಟ್ಟಿ ಸುಮಾರು ಏಳೆಂಟು ನೂರು ವರುಷಗಳಾಗಿರಬಹುದು. ಅಲ್ಲಲ್ಲಿ ಬಿದ್ದ ಭಾಗವನ್ನು ಹೊಸದಾಗಿ ಕಟ್ಟಿಸಿದ್ದಾರೆ. ಗುಡಿಯ ಮುಖವು ಪೂರ್ವಕ್ಕೆ ಇರುವದು. ಸುತ್ತಲೂ ವಿಸ್ತೀರ್ಣವಾದ ಪಟಾಂಗಣವಿದೆ. ಅದರಾಚೆಗೆ ನಾಲ್ಕು ದಿಕ್ಕಿಗೂ ಕಲ್ಲಿನ ಪೌಳಿಗಳಿವೆ. ದೂರದಿಂದ ನೋಡಿದರೆ ಪೌಳಿಗಳ ಹೊರಗಡೆಯ ಗೋಡೆಯು ಗುಡಿಯ ಸುತ್ತಲೂ ಕಟ್ಟಿದ ಕೋಟೆಯಂತೆ ಕಾಣುವದು. ಪೌಳಿಗಳ ಮತ್ತು ಪಟಾಂಗಣದ ನೆಲಕ್ಕೆ ಹಾಸುಗಲ್ಲುಗಳನ್ನು ಹೊಂದಿಸಿದ್ದಾರೆ. ಗುಡಿಯ ಮುಂದೆ ಪೂರ್ವ ದಿಕ್ಕಿಗೆ ಮುಖ ಮಾಡಿ ಒಂದು ಎತ್ತರವಾದ ಮಹಾದ್ವಾರವನ್ನು ಕಟ್ಟಿದ್ದಾರೆ. ಪಟಾಂಗಣದಲ್ಲಿ ಹಲವು ಸಣ್ಣ ಸಣ್ಣ ಗುಡಿಗಳೂ ಉಂಟು. ಗುಡಿಯ ಶಿಖರವು ಬಲು ಎತ್ತರವಾಗಿದೆ. ಅದು ಬಹು ದೂರದಿಂದ ಕಾಣಿಸುವದು. ಗರ್ಭ ಗುಡಿಯಲ್ಲಿ ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು ಸಿಂಹದ ಮೇಲೆ ಕುಳಿತ ಬನಶಂಕರಿಯ ಸುಂದರ ಮೂರ್ತಿಯು ಅದೆ.



ಗುಡಿಯ ಎದುರಿಗೆ ದೊಡ್ಡದೊಂದು ಹೊಂಡವು ಅದೆ. ಅದರ ನಾಲ್ಕೂ ನಿಟ್ಟನ್ನು ಕಲ್ಲಿನಿಂದ ಕಟ್ಟಿ ಇಳಿಯುವದಕ್ಕೆ ಪಾವಟಿಗೆಗಳನ್ನು ಮಾಡಿದ್ದಾರೆ. ಹೊಂಡದ ಮೇಲೆ ನಾಲ್ಕೂ ನಿಟ್ಟಿಗೆ ಕಲ್ಲಿನ ಮಂಟಪಗಳನ್ನು ಸಾಲಾಗಿ ಕಟ್ಟಿರುವರು. ಹೊಂಡದ ನೀರು ತಿಳಿಯಾಗಿರುವದು. ನೀರಿನ ಮೇಲೆ ಕಮಲದ ಬಳ್ಳಿ ಹಬ್ಬಿವೆ. ಅವುಗಳ ದೊಡ್ಡ ಎಲೆಗಳೂ, ಅರಳಿದ ಕೆಂಪು ಬಿಳಿಯ ಕಮಲಗಳೂ ನೋಡುವವರ ಮನಸ್ಸನ್ನು ಸೆಳೆಯುವವು. ಹೊಂಡದ ಬುಡದಲ್ಲಿರುವ ದೊಡ್ಡ ಸೆಲೆಗಳಿಂದ ನೀರು ವಿಪುಲವಾಗಿ ಪುಟಿಯುವದು. ಹೊಂಡವು ತುಂಬಿ ನೀರು ಹೊರಚೆಲ್ಲಬಾರದೆಂದು ಕಾಲುವೆಯನ್ನು ಕಟ್ಟಿರುವರು. ಅದು ಯಾವಾಗಲೂ ತುಂಬಿ ಹರಿಯುವದು.

ಗುಡಿಯ ಸಮೀಪದಲ್ಲಿ 'ಸರಸ್ವತಿ' ಹಳ್ಳವಿದೆ. ಅದರಲ್ಲಿ ನೀರು ವಿಪುಲವಾಗಿ ಹರಿಯುವದು. ಈ ಹಳ್ಳದ ದಂಡೆಗುಂಟ ಅಪರೂಪವಾದ ಕೆಲವು ವನಸ್ಪತಿಗಳು ಬೆಳೆಯುವವು. ಹಳ್ಳದ ಮತ್ತು ಹೊಂಡದ ಕಾಲುವೆಗಳ ನೀರನ್ನು ಸುತ್ತಲಿನ ತೋಟಗಳಿಗೆ ಉಪಯೋಗಿಸುವರು. ಬಾಳೆ, ಎಲೆ ಬಳ್ಳಿಗಳನ್ನು ವಿಶೇಷವಾಗಿ ಬೆಳೆಯುವರು. ಇಲ್ಲಿಯ ಬಾಳೆಯ ಹಣ್ಣು ಬಹಳ ರುಚಿಕರ. ವೀಳ್ಯದೆಲೆಗಳು ಬಹಳ ಪ್ರಸಿದ್ಧ. ಅವನ್ನು ಪರಸ್ಥಳಕ್ಕೆ ಮಾರಾಟಕ್ಕಾಗಿ ಕಳಿಸುವರು. ಹಳ್ಳದ ದಂಡೆಗುಂಟ

ತೋಟಗಳಲ್ಲಿ ಗುಡಿಯ ಸುತ್ತಲೂ ಎತ್ತರವಾಗಿ ಬೆಳೆದ ತೆಂಗಿನ ಬನಗಳು ಈ ಸ್ಥಳಕ್ಕೆ ವಿಶೇಷ ಶೋಭೆಯನ್ನು ಉಂಟುಮಾಡಿರುವವು. ಗುಡಿಯಿಂದ ಸುಮಾರು ಒಂದು ಒಂದೂವರೆ ಮೈಲು ಅಂತರದಲ್ಲಿ ಮಲಪ್ರಭಾ ನದಿಯು ಹರಿಯುತ್ತಿರುವದು. ಗುಡಿಯ ಹಿಂಬದಿಯಲ್ಲಿ ಸುಮಾರು ಒಂದೆರಡು ಮೈಲು ಅಂತರದ ಮೇಲೆ ಎತ್ತರವಾದ ಗುಡ್ಡದ ಸಾಲು ಹಬ್ಬಿದೆ. ಗುಡಿಯ ಉತ್ತರಕ್ಕೆ ಬೈಲು ಪ್ರದೇಶವಿದೆ ಅಲ್ಲಿ ಮಾವು, ಹುಣಿಸೆ ಬೇವು, ಆಲ ಮೊದಲಾದ ದೊಡ್ಡವಾದ ಗಿಡಗಳನ್ನು ಬೆಳೆಸಿದ್ದಾರೆ. ಅವು ವಿಪುಲವಾಗಿ ನೆರಳನ್ನು ಕೊಡುವವು. ಸಿರಿವಂತರಾದ ಬನಶಂಕರಿಯ ಭಕ್ತರು ಯಾತ್ರೆಯ ಕಾಲದಲ್ಲಿ ಬರುವ ಜನರಿಗಾಗಿ ಧರ್ಮಶಾಲೆಗಳನ್ನೂ ಪೌಳಿಗಳನ್ನೂ ತಮಗಾಗಿ ಮನೆಗಳನ್ನೂ ಕಟ್ಟಿಸಿರುವರು.

ಪ್ರತಿ ವರುಷ ಬನದ ಹುಣ್ಣಿವೆಗೆ ಬಹಳ ದೊಡ್ಡ ಜಾತ್ರೆ ನೆರೆಯುವದು. ಆ ದಿನ ತೇರು ಎಳೆಯುವರು. ಆಗ ಎಲ್ಲಿ ನೋಡಿದಲ್ಲಿ ಗದ್ದಲವೇ ಗದ್ದಲ! ಮೂವತ್ತು, ನಾಲ್ವತ್ತು ಸಾವಿರ ಜನರು ಜಾತ್ರೆಗಾಗಿ ಬರುವರು; ನಾಲ್ಕೈದು ದಿನ ಇರುವರು. ಜಾತ್ರೆಯಲ್ಲಿ ಬಹಳ ವ್ಯಾಪಾರವು ಆಗುತ್ತದೆ. ಮಿಠಾಯಿಗಾರರು, ಬಾಗವಾನರು, ಬಳೆಗಾರರು, ಬುಕ್ಕಿಟ್ಟಿಗಾರರು ಸಾಲು ಸಾಲಾಗಿ ಅಂಗಡಿಗಳನ್ನು ಹಚ್ಚಿರುತ್ತಾರೆ. ಚೆಂದ ಚೆಂದದ ಆಟಿಗೆಗಳೂ ತಾಮ್ರ ಹಿತ್ತಾಳಿಯ ತರತರದ ಪಾತ್ರೆಗಳೂ ಕಟ್ಟಿಗೆ ಕಬ್ಬಿಣಗಳ ಸಾಮಾನುಗಳೂ ಹೇರಳವಾಗಿ ಸಿಗುತ್ತವೆ. ಅಲ್ಲದೆ ಆಟ ನೋಟಗಳಿಗೂ ಈ ಜಾತ್ರೆಯಲ್ಲಿ ಕೊರತೆಯಿಲ್ಲ. ತೊಟ್ಟಿಲ ಜೀಕ, ಗೊಂಬೆಯ ಆಟ, ಮುಂತಾದ ಮಕ್ಕಳ ಆಟಗಳೂ, ನಾಟಕಗಳೂ, ಬಯಲಾಟಗಳೂ ಬರುತ್ತವೆ. ಜಾತ್ರೆಯಲ್ಲಿ ಇಷ್ಟು ಗದ್ದಲವಿದ್ದರೂ ಎಲ್ಲ ಜನರಿಗೂ ನೀರು, ನೆರಳು, ಇರುವ ಸ್ಥಳ ಇವುಗಳ ಕೊರತೆ ಏನೂ ಆಗುವದಿಲ್ಲ.

ಗುಡಿಯೊಳಗೆ ಕಲ್ಲಿನ ತೊಲೆ ಕಂಬಗಳ ಮೇಲೆ ಹಿಂದಿನ ಕಾಲದ ರಾಜರೂ ಅಧಿಕಾರಿಗಳೂ ದಾನಶೂರರೂ ಕೆತ್ತಿಸಿದ ಶಿಲಾ ಶಾಸನಗಳು

ಅವೆ. ಗುಡಿಯ ಮುಂದೆ ಈಗ ಮುರಿದು ಬಿದ್ದಿರುವ ಒಂದೇ ಬಂಡೆಗಲ್ಲಿನಲ್ಲಿ ಕೊರೆದ ದೀಪಸ್ತಂಭಗಳಮೇಲೆಯೂ ಲಿಪಿಗಳು ಅವೆ. ಒಂದೂವರೆ ಸಾವಿರ ವರ್ಷಗಳ ಹಿಂದೆ ನಮ್ಮ ನಾಡನ್ನು ಆಳಿದ ಚಾಲುಕ್ಯರ ಕಾಲದಿಂದಲೂ ಬಂದಿರುವ ದೇವಸ್ಥಾನಗಳಲ್ಲಿ ಇದು ಒಂದು. ಆದದರಿಂದ ಇದು ಬಲು ಪ್ರಾಚೀನವೂ ಪ್ರಸಿದ್ಧವೂ ಆಗಿದೆ. ಸೃಷ್ಟಿ ಸೌಂದರ್ಯದ ಬೀಡಾದ ಈ ಸ್ಥಾನದಲ್ಲಿ ಬನಗಳ ನಡುವೆ ಜಗನ್ಮಾತೆ ಶಂಕರಿ ನೆಲೆಸಿರುವಳು. ಆದದರಿಂದ ಇದಕ್ಕೆ ಬನಶಂಕರಿ ಎಂಬ ಹೆಸರು ಬಂದಿದೆ.

**ಅಭ್ಯಸನಗಳು:—**

೧) ಬನಶಂಕರಿಯ ದೇವಸ್ಥಾನವು ಎಲ್ಲಿ ಅದೆ?

೨) ಕೆಳಗಿನ ಅರ್ಥದ ಬೇರೆ ಬೇರೆ ಶಬ್ದಗಳು ಈ ಪಾಠದಲ್ಲಿ ಬಂದಿವೆ. ಅವು ಯಾವವೆಂಬದನ್ನು ಹುಡುಕಿ ಬರೆಯಿರಿ:

(ಅ) ದೊಡ್ಡ ಬಾಗಿಲು (ಆ) ಬಹಳ ವರುಷಗಳ ಹಿಂದಿನ (ಇ) ಲೋಕದ ತಾಯಿ

೩) ಬನಶಂಕರಿಯ ಜಾತ್ರೆಯ ವರ್ಣನೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ

೪) ಬನಶಂಕರಿಯ ಗುಡಿಯ ಸುತ್ತಲಿನ ಸ್ಥಾನಗಳನ್ನು ಬಣ್ಣಿಸಿರಿ.

## ೧೬. ಇಲಿ

ನೀವು ಇಲಿಗಳನ್ನು ನೋಡಿರುವಿರಲ್ಲವೇ? ಅವುಗಳ ಆಕೃತಿ ಮೋಟ ಮರಿಗಳಂತೂ ಮುದ್ದಾಗಿ ಕಾಣಿಸುವವು. ಇಲಿಯು ಗಣೇಶನ ವಾಹನ. ಗಣೇಶಚವತಿಯ ದಿನ ಗಣಪತಿಯೊಡನೆ ಇಲಿಯ ಪೂಜೆ ಮಾಡುವರು. ಆದರೂ ಇಲಿಯನ್ನು ಯಾರೂ ಪ್ರೀತಿಸುವದಿಲ್ಲ. ಕಾರಣವೇನು? ಅದು ನಮಗೆ ಉಪಯುಕ್ತವಾದ ಪ್ರಾಣಿಯಲ್ಲ

ತಿರುಗಿ ಕೇಳಿದರೆ ಇಲಿಗಳು ನಮಗೆ ಅಪಕಾರವನ್ನು ಮಾಡುವವು. ಗುದ್ದುಗಳನ್ನು ತೋಡಿ ಮನೆಯ ನೆಲವನ್ನೂ ಗೋಡೆಗಳನ್ನೂ ಪೊಳ್ಳು ಮಾಡುವವು. ನಮ್ಮ ಕಾಳುಕಡಿ, ಅರಿವೆಅಂಚಡಿ, ಇವುಗಳನ್ನು ಕಡಿದು ಕೆಡಿಸುವವು. ಕಾಯಿಪಲ್ಯೆಗಳನ್ನು ಕಡಿಯುವವು. ಆಗ ಕಡಿದ ಭಾಗಗಳನ್ನಾದರೂ ನಾವು ಚೆಲ್ಲಿಬಿಡಬೇಕಾಗುವದು; ಏಕೆಂದರೆ, ಇಲಿಗಳ ಹಲ್ಲಿನಲ್ಲಿ ನಂಜು ಇರುವದು. ಇಲಿಗಳಲ್ಲಿ ಸೊಂಡೆಯ ಇಲಿ ಎಂಬ



ಒಂದು ಜಾತಿಯುಂಟು. ಆ ಜಾತಿಯ ಇಲಿಗಳು ನಮ್ಮನ್ನು ಕಡಿದರೆ ನಮಗೆ ನಂಜು ಏರುವದು.

ಹೆಗ್ಗಣಗಳನ್ನು ನೀವು ಬಲ್ಲಿರಿ; ಅವು ಈ ಜಾತಿಯಲ್ಲಿ ಹಿರಿಯ ಮನೆತನದವೆಂದು ಹೇಳಬಹುದು. ಆಕಾರದಲ್ಲಾಗಲಿ, ಆಹಾರ ಸೇವಿಸುವದರಲ್ಲಾಗಲಿ ಅವು ಹಿರಿಯವು ಇಷ್ಟೇ ಅಲ್ಲ, ಅವು ನಮಗೆ ಅಪಾಯ ಮಾಡುವದರಲ್ಲಿಯೂ ಹಿರಿಯವಾಗಿವೆ. ಹೆಗ್ಗಣ ಹತ್ತಿದ ಮನೆ, ಮದ್ಯದ ಚಟ ಹತ್ತಿದ ಮಾನವ, ಗೆದ್ದಲಿ ಹತ್ತಿದ ಕಟ್ಟಿಗೆ ಇವು ಕ್ಷಣಕ್ಷಣಕ್ಕೆ ನಾಶಹೊಂದುತ್ತವೆ. ಇದಲ್ಲದೆ ಹೆಗ್ಗಣಗಳು ಬಲು ಹೊಲಸು ಪ್ರಾಣಿಗಳು. ಆದದರಿಂದ ನಾವು ಹೆಗ್ಗಣಗಳನ್ನು ನಮ್ಮ ವೈರಿಗಳೆಂದು ತಿಳಿಯುವೆವು.

ನಮಗೆ ಬೇಕಾಗುವ ಪದಾರ್ಥಗಳನ್ನು ಇಲಿ, ಹೆಗ್ಗಣಗಳು ಹಾಳು ಮಾಡುವಷ್ಟು ಇನ್ನಾವ ಪ್ರಾಣಿಗಳೂ ಮಾಡುವದಿಲ್ಲ. ಒಕ್ಕಲಿಗರು ಸಂಗ್ರಹಿಸಿದ ಧಾನ್ಯಗಳನ್ನು ಅವು ಕೆಡಿಸುವವು. ಸುಮಾರು ನಾಲ್ಕರಲ್ಲಿ ಒಂದು ಭಾಗ ಆಹಾರ ಧಾನ್ಯಗಳನ್ನು ಅವು ಹಾಳು ಮಾಡುವವೆಂದೂ, ಒಂದು ವರ್ಷದಲ್ಲಿ ಒಂದು ಇಲಿ ಸುಮಾರು ಎರಡು ನೂರು ಸೇರು ಕಾಳುಗಳನ್ನು ತಿಂದು ಕೆಡಿಸುವದೆಂದೂ ಓರ್ವ ಪ್ರಾಣಿ ಶಾಸ್ತ್ರಜ್ಞನು ಲೆಕ್ಕ ಮಾಡಿರುವನು. ಧಾನ್ಯದ ಕೊರತೆಯ ಈಗಿನ ಕಾಲದಲ್ಲಿ ಇಲಿ,

ಹೆಗ್ಗಣಗಳಿಂದಾಗುವ ಈ ಹಾನಿಯನ್ನು ತಪ್ಪಿಸಿದರೆ ದೇಶಕ್ಕೆ ಎಷ್ಟು ಸುಖವಾಗುವದು!

ಅಂಗಡಿಗಳಲ್ಲಿ ಇಲಿಗಳ ಉಪದ್ರವವು ಬಹಳ. ಇವುಗಳ ಕಾಟ ತಪ್ಪಿಸಲಿಕ್ಕೆ ಅಂಗಡಿಕಾರರು ಬಹಳ ಕಷ್ಟಪಡಬೇಕಾಗುವದು. ಒಂದು ಇಲಿ ಒಂದು ವರ್ಷದಲ್ಲಿ ಸುಮಾರು ಹದಿನೈದು ರೂಪಾಯಿಗಳ ಬೆಲೆಯ ಆಹಾರವನ್ನು ನಾಶಮಾಡುವದೆಂದು ಎಣಿಕೆ ಮಾಡಲಾಗಿದೆ.

ಪರದೇಶಗಳಿಂದ ಇಲ್ಲಿಗೆ ಬರುವ ಹಾಗೂ ಇಲ್ಲಿಂದ ಪರದೇಶಗಳಿಗೆ ಹೋಗುವ ಹಡಗುಗಳೊಳಗೆ ಇಲಿಗಳು ಬಹಳವಾಗಿ ಇರುತ್ತವೆ. ಒಂದು ಹಡಗದಲ್ಲಿ ಸುಮಾರು ಐದುನೂರು ಇಲಿಗಳು ಇರುವವೆಂದು ಕಂಡು ಬಂದಿದೆ. ಇವು ಹಡಗಗಳಲ್ಲಿರುವ ಪದಾರ್ಥಗಳನ್ನು ತಿಂದು ಕೆಡಿಸುವವು.

• ಇಲಿಗಳಿಗೆ ಪೀಳಿಗೆ ಹೆಚ್ಚು. ನಮ್ಮ ಮನೆಗಳಲ್ಲಿ ಈ ವರ್ಷ ಹತ್ತೆಂಟು ಇಲಿಗಳಿದ್ದರೆ, ಮುಂದಿನ ವರ್ಷದಲ್ಲಿ ನೂರಾರು ಇಲಿಗಳಾಗು ವವು. ಹೀಗೆ ವರ್ಷವರ್ಷಕ್ಕೆ ಅವುಗಳ ಪೀಳಿಗೆಯು ಬೆಳೆಯುತ್ತ ಹೋದರೆ ನಮ್ಮ ಗತಿಯೇನು? ಇದಲ್ಲದೆ ಅಡವಿಯಲ್ಲಿ, ಹೊಲಗಳಲ್ಲಿ, ತೋಟಗಳಲ್ಲಿ ಎಲ್ಲೆಲ್ಲಿಯೂ ಇಲಿಗಳು ವಾಸಿಸುತ್ತವೆ. ಅಲ್ಲಿಯೂ ಅವುಗಳ ಸಂಖ್ಯೆ ಬೆಳೆಯುತ್ತಲೇ ಇರುತ್ತದೆ.

ಇಲಿಗಳು ಇನ್ನೊಂದು ಬಗೆಯಿಂದ ನಮಗೆ ಅಪಾಯ ಮಾಡು ವವು. ನಮ್ಮ ದೇಶದಲ್ಲಿ ಪ್ರತಿವರ್ಷ ಲಕ್ಷಾವಧಿ ಜನರು 'ಪ್ಲೇಗ' ಎಂಬ ಪಿಡುಗಿನಿಂದ ಸಾಯುತ್ತಾರೆ. ಈ ಪಿಡುಗನ್ನು ಇಲಿಗಳು ಹಬ್ಬಿಸು ತ್ತವೆಂದು ಈಚೆಗೆ ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ.

ಈಮೇರೆಗೆ ಇಲಿಗಳು ಮನುಷ್ಯನಿಗೆ ಹಲವುಬಗೆಯಿಂದ ಅಪಾಯ ವನ್ನು ಮಾಡುವವು. ಸೃಷ್ಟಿಯಲ್ಲಿ ಇಲಿಗಳ ನಾಶಕ್ಕೂ ಯೋಜನೆ ಇರುವದು. ಬೆಕ್ಕುಗಳು ಇಲಿಗಳ ಹುಟ್ಟು ವೈರಿಗಳು. ಅವು ನಮ್ಮ ಮನೆಯಲ್ಲಿರುವ ಇಲಿಗಳ ಬೇಟೆಯಾಡಿ ಅವನ್ನು ತಿಂದು ಬಿಡುವವು. ಅಡವಿಯಲ್ಲಿಯೂ ಹೊಲದಲ್ಲಿಯೂ ಇರುವ ಇಲಿಗಳನ್ನು ಹಾವು ಮಂಟಬೆಕ್ಕುಗಳು ತಿನ್ನುತ್ತವೆ. ಹೀಗೆ ಇಲಿಗಳ ಪೀಳಿಗೆ ಮಿತಿ ಮೀರ ದಂತೆ ಸೃಷ್ಟಿದೇವಿಯ ಯೋಜನೆಯುಂಟು.

ಹೀಗಿದ್ದರೂ ಇಲಿಗಳ ಕಾಟವು ಆಗಾಗ ಹೆಚ್ಚುವದುಂಟು. ಅವುಗಳನ್ನು ಕೊಲ್ಲುವದಕ್ಕಾಗಿ ಕೆಲವರು ವಿಷ ಬೆರಿಸಿದ ಹಿಟ್ಟಿನ ಉಂಡಿಗಳನ್ನು ಅವುಗಳಿಗೆ ತಿನ್ನಲಿಕ್ಕೆ ಇಡುತ್ತಾರೆ. ಇನ್ನು ಕೆಲವರು ಬಲೆಗಳನ್ನು ಹಾಕಿ, ಅವುಗಳನ್ನು ಹಿಡಿಯುತ್ತಾರೆ. ನಗರಸಭೆಯವರು ಪಟ್ಟಣಗಳಲ್ಲಿ ಇಲಿಗಳನ್ನು ಹಿಡಿಯುವ ಬಲೆಗಳನ್ನು ಮನೆಮನೆಗೆ ಒದಗಿಸುತ್ತಾರೆ

ಮನೆಗಳಲ್ಲಿ ಇಲಿಗಳು ಹೆಚ್ಚಾಗುವದಕ್ಕೆ ನಮ್ಮ ಎಚ್ಚರಗೇಡಿತನವು ಕಾರಣವಾಗುತ್ತದೆ. ಕಾಳುಕಡಿ, ಅಡಿಗೆ ಮುಂತಾದವು ಸ್ವಲ್ಪವೂ ಅವುಗಳಿಗೆ ದೊರೆಯದಂತೆ ಮುಚ್ಚಿ ಇಡುವ ವ್ಯವಸ್ಥೆಯನ್ನು ಎಲ್ಲರೂ ಮಾಡಬೇಕು. ಅವು ಆಹಾರ ಸಿಗದ ಮನೆಯಲ್ಲಿ ಇರುವದಿಲ್ಲ. ಮನೆಯೊಳಗಿನ ಕಾಯಿಪಲ್ಯೆ, ಅನ್ನ ರೊಟ್ಟಿಗಳ ಚೂರುಗಳು ಇವನ್ನೆಲ್ಲ ನಾವು ಇಲಿಗಳಿಗೆ ಸಿಕ್ಕದಂತೆ ದಿನಾಲು ದೂರ ಸಾಗಿಸಬೇಕು. ಮನೆಯಲ್ಲಿ ಇಲಿಗಳ ಗುದ್ದುಗಳು ಆಗದಂತೆ ನೋಡಿಕೊಳ್ಳುತ್ತಿರಬೇಕು. ಬೆಕ್ಕುಗಳನ್ನು ಸಾಕಬೇಕು.

**ಅಭ್ಯಸನಗಳು:—**

೧. ಜನರು ಇಲಿಯನ್ನು ಯಾಕೆ ಪ್ರೀತಿಸುವದಿಲ್ಲ?
೨. 'ಹೆಗ್ಗಣಗಳು ನಮ್ಮ ವೈರಿಗಳು' ಎಂದು ನಾವು ಯಾಕೆ ತಿಳಿಯುವೆವು?
೩. ಒಂದು ಇಲಿಯು ಒಂದು ವರ್ಷದಲ್ಲಿ ಎಷ್ಟು ಆಹಾರವನ್ನು ಹಾಳುಮಾಡುವದು?
೪. ಇಲಿಗಳು ಎಲ್ಲೆಲ್ಲಿ ವಾಸಿಸುವವು?
೫. ಇಲಿಗಳು ಯಾವ ಪಿಡುಗನ್ನು ಹಬ್ಬಿಸುವವು?
೬. ಇಲಿಗಳನ್ನು ನಾಶ ಮಾಡುವದಕ್ಕೆ ಸೃಷ್ಟಿಯಲ್ಲಿ ಯಾವ ಯೋಜನೆಯುಂಟು?
೭. ಇಲಿಗಳ ಕಾಟ ತಪ್ಪಿಸಲು ಜನರು ಯಾವ ಯಾವ ಉಪಾಯಗಳನ್ನು ಕೈಕೊಳ್ಳುವರು?
೮. ಹೌದು, ಅಲ್ಲ ಹೇಳಿರಿ:
   ಅ) ಸೊಂಡೆಯ ಇಲಿಗಳು ಕಡಿದರೆ ನಮಗೆ ಏನೂ ಆಗುವದಿಲ್ಲ.
   ಆ) ಇಲಿಗಳಿಂದ ಪ್ಲೇಗು ಎಂಬ ಪಿಡುಗು ಹಬ್ಬುವದು.
   ಇ) ಹೆಗ್ಗಣಗಳಿಂದ ನಮಗೆ ಬಹಳ ಉಪಯೋಗವುಂಟು.
   ಈ) ಬೆಕ್ಕು ಇಲಿಯ ಗೆಳೆಯ.

# ೧೭. ಠಕ್ಕ ಕತ್ತೆ



ನಾಗಪ್ಪ ಒಬ್ಬ ಸಣ್ಣ ವ್ಯಾಪಾರಸ್ಥ; ನೆರೆಯ ದೊಡ್ಡ ಹಳ್ಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದನು. ಸಮೀಪದ ಪೇಟೆಯೂರಿಗೆ ಹೋಗಿ ಸಾಮಾನುಗಳನ್ನು ಕೊಂಡು ತರುತ್ತಿದ್ದನು ಸಾರಿಗೆಯ ಕೆಲಸಕ್ಕಾಗಿ ಎರಡು ಕತ್ತೆಗಳನ್ನು ಸಾಕಿದ್ದನು; ಅವುಗಳನ್ನು ಚೆನ್ನಾಗಿ ಜೋಪಾನ ಮಾಡುತ್ತಿದ್ದನು; ಯಾಕೆಂದರೆ, ಅವುಗಳಿಂದಲೇ ಅವನ ಜೀವನವು ಸಾಗಿತ್ತು.

ಒಮ್ಮೆ, ನೆರೆಯ ಪಟ್ಟಣದಿಂದ ತನ್ನ ಹಳ್ಳಿಗೆ ಉಪ್ಪು ತರಬೇಕಾಗಿತ್ತು. ತನ್ನ ಎರಡೂ ಕತ್ತೆಗಳ ಮೇಲೆ ಒಂದೊಂದು ಉಪ್ಪಿನ ಚೀಲವನ್ನು ಹೇರಿದನು. ಮುಂದಿನ ಕತ್ತೆಯ ಮೇಲೆ ಅವನು ಕುಳಿತು ತನ್ನ ಹಳ್ಳಿಗೆ ಹೊರಟನು. ಹಿಂದಿನ ಕತ್ತೆಯೂ ಹಿಂಬಾಲಿಸಿತು. ದಾರಿಯಲ್ಲಿ ಒಂದು ಹಳ್ಳವು ಹತ್ತಿತು.

ಹಳ್ಳದಲ್ಲಿ ನೀರು ಹೆಚ್ಚಿಗೆ ಇರಲಿಲ್ಲ. ಹಳ್ಳವನ್ನು ದಾಟುವದು ತೊಂದರೆಯೆನಿಸಲಿಲ್ಲ. ಮುಂದಿನ ಕತ್ತೆಯು ನೆಟ್ಟಗೆ ದಾಟಿತು. ಹಿಂದಿನ ಕತ್ತೆಯು ಕಾಲು ಜಾರಿ ನೀರಿನಲ್ಲಿ ಬಿದ್ದಿತು. ಸ್ವಲ್ಪ ಹೊತ್ತಿನ ಮೇಲೆ ಎದ್ದು ನಿಂತಿತು. ಆಗ ಮೈಮೇಲಿನ ಚೀಲವು ಹಗುರಾಗಿತ್ತು; ಏಕೆ

ಗೊತ್ತೇ? ನೀರಿನಲ್ಲಿ ಉಪ್ಪು ಕರಗುತ್ತದೆ. ಅದರಿಂದ ಚೀಲದೊಳಗಿನ ಉಪ್ಪು ಕರಗಿ ಕಡಿಮೆಯಾಗಿತ್ತು. ಈಗ ಕತ್ತೆಗೆ ಬಲು ಹಿಗ್ಗಾಯಿತು. ಒಳ್ಳೇ ಹೆಮ್ಮೆಯಿಂದ ಮುಂದೆ ಸಾಗಿತು ನಾಗಪ್ಪನು ಹಿಂತಿರುಗಿ ಇದೆಲ್ಲವನ್ನೂ ನೋಡಿದನು. ಕತ್ತೆಯು ಕಾಲು ಜಾರಿ ಬಿದ್ದುದರಿಂದ ಉಪ್ಪು ನೀರುಪಾಲಾಯಿತೆಂದು ಮರುಗುತ್ತ ಮನೆಗೆ ಬಂದನು.

ಮತ್ತೊಂದು ದಿನ ಉಪ್ಪು ತರಲಿಕ್ಕೆ ನಾಗಪ್ಪನು ಮತ್ತೆ ಪಟ್ಟಣಕ್ಕೆ ಹೋದನು. ಕತ್ತೆಗಳ ಮೇಲೆ ಉಪ್ಪಿನ ಚೀಲಗಳನ್ನು ಹೇರಿಕೊಂಡು ಹಳ್ಳಿಗೆ ಹೊರಟನು. ದಾರಿಯಲ್ಲಿ ಹಳ್ಳವು ಬಂದಕೂಡಲೆ ಹಿಂದಿನ ಕತ್ತೆಗೆ ಅಂದಿನ ದಿನದ ನೆನಪಾಯಿತು. ಕೂಡಲೆ ಅದು ಕಾಲು ಜಾರಿ ದಂತೆ ನಟಿಸಿ ಹಳ್ಳದಲ್ಲಿ ಬೇಕೆಂದು ಬಿದ್ದು ಹೊರಳಾಡಿ ಕೆಲವು ಹೊತ್ತಿನ ಮೇಲೆ ಎದ್ದು ನಿಂತಿತು. ಹಿಂದಿನ ದಿನಕ್ಕಿಂತ ಈ ದಿನ ಚೀಲವು ಹೆಚ್ಚಿಗೆ ಹಗುರಾಯಿತು. ಅದರಿಂದ ಕತ್ತೆಗೆ ತನ್ನ ಠಕ್ಕತನಕ್ಕಾಗಿ ಬಲು ಹೆಮ್ಮೆ ಎನಿಸಿತು. ದಿನಾಲೂ ಹೀಗೆಯೇ ಮಾಡಬೇಕೆಂದು ಆ ಕತ್ತೆ ಗೊತ್ತು ಮಾಡಿಕೊಂಡಿತು.

ಒಂದು ದಿನ ನಾಗಪ್ಪನಿಗೆ ಕತ್ತೆಯ ಗತ್ತು ತಿಳಿಯಿತು. ಅದಕ್ಕೆ ಬುದ್ಧಿಯನ್ನು ಕಲಿಸಬೇಕೆಂದು ಅವನು ಉಪ್ಪಿನ ಚೀಲದಬದಲು ತೆಂಗಿನ ಕಾಯಿಯ ಚೀಲವನ್ನು ಅದರ ಮೇಲೆ ಹೇರಿದನು. ಹಳ್ಳ ಬಂದ ಕೂಡಲೆ ಹಿಂದಿನ ಕತ್ತೆ ತನ್ನ ಗತ್ತನ್ನು ಆರಂಭಿಸಿತು. ಬಹಳ ಹೊತ್ತು ನೀರಿನಲ್ಲಿ ಹೊರಳಾಡಿ ಆ ಕತ್ತೆ ಎದ್ದು ನಿಂತಿತು. ಆಗ ಬೆನ್ನ ಮೇಲಿನ ಭಾರವು ಮತ್ತಿಷ್ಟು ಹೆಚ್ಚಾಗಿತ್ತು. ತೆಂಗಿನ ಸಿಪ್ಪೆಯು ನೀರನ್ನು ಹಿಡಿ ದಿತ್ತು. ಈ ಸಾರೆ ಕತ್ತೆಗೆ ಬುದ್ಧಿ ಬಂತು. ಮಾಡುವದೇನು? ಮಾಡಿದ ತಪ್ಪಿಗೆ ಮರುಗುತ್ತ ಸಾವಕಾಶವಾಗಿ ಮನೆಗೆ ಬಂದಿತು. ಅಂದಿನಿಂದ ಕತ್ತೆಯು ತನ್ನ ಠಕ್ಕತನವನ್ನು ಬಿಟ್ಟುಬಿಟ್ಟಿತು.

**ಅಭ್ಯಸನಗಳು:—**

೧. ನಾಗಪ್ಪನು ಕತ್ತೆಗಳನ್ನು ಏತಕ್ಕಾಗಿ ಸಾಕಿದ್ದನು?

೨. ನಾಗಪ್ಪನ ಒಂದು ಕತ್ತೆಯು ಅವನನ್ನು ಯಾವ ರೀತಿಯಿಂದ ಠಕ್ಕಿಸುತ್ತಿತ್ತು?

೩. ನಾಗಪ್ಪನು ಆ ಕತ್ತೆಯನ್ನು ಹೇಗೆ ತಿದ್ದಿದನು?

೪. ಕೆಳಗಿನ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯವನ್ನು ರಚಿಸಿರಿ:
ಗತ್ತು, ಸಾರಿಗೆ, ಹಿಂಬಾಲಿಸು, ಠಕ್ಕಿಸು

# ೧೮. ಪಾಶುಪತಾಸ್ತ್ರ ಪ್ರಾಪ್ತಿ

## ಭಾಗ ೧



ಪಾಂಡವರು ವನವಾಸದಲ್ಲಿ ಇದ್ದಾಗ, ವ್ಯಾಸ ಋಷಿಯು ಒಮ್ಮೆ ಅವರನ್ನು ಕಾಣಲಿಕ್ಕೆ ಬಂದನು. ಅವನು ಧರ್ಮರಾಜನನ್ನು ಕುರಿತು— "ಅಯ್ಯಾ, ಕೌರವರೊಡನೆ ಯುದ್ಧ ಮಾಡದೆ ನಿಮ್ಮ ರಾಜ್ಯವನ್ನು ನೀವು ಪಡೆಯಲಾರಿರಿ, ದೇವರ ದಯವಿಲ್ಲದೆ ಯುದ್ಧದಲ್ಲಿ ಜಯವು ದೊರೆಯಲಾರದು; ಆದದರಿಂದ ಅರ್ಜುನನು ಮಹಾದೇವನನ್ನು ತಪಸ್ಸಿನಿಂದ ಮೆಚ್ಚಿಸಲಿ, ಅವನಿಂದ ದಿವ್ಯಾಸ್ತ್ರವನ್ನು ಪಡೆಯಲಿ" ಎಂದು ಹೇಳಿದನು. ಧರ್ಮರಾಜನೂ ಅರ್ಜುನನೂ ಈ ಮಾತಿಗೆ ಒಪ್ಪಿಕೊಂಡರು.

ಅರ್ಜುನನು ತಪಸ್ಸಿಗಾಗಿ ಹಿಮಾಲಯದೊಳಗಿನ 'ಇಂದ್ರಕೀಲ' ಎಂಬ ಪ್ರದೇಶಕ್ಕೆ ಹೊರಟನು. ಸಂಗಡ ಬಿಲ್ಲುಬಾಣಗಳನ್ನು ತೆಗೆದುಕೊಂಡನು. ಭಯಂಕರವಾದ ಅಡವಿ ಅದು! ಮನುಷ್ಯರ ಸುಳಿವೇ ಇಲ್ಲ. ಆದರೆ ತಪಸ್ಸಿಗೆ ಯೋಗ್ಯವಾದ ಸ್ಥಳವು. ಅಲ್ಲಿ ಅರ್ಜುನನು ಉಗ್ರವಾದ ತಪಸ್ಸನ್ನು ಮಾಡತೊಡಗಿದನು. ನಿದ್ದೆಯಿಲ್ಲ; ನೀರಡಿಕೆಯಿಲ್ಲ; ಊಟ

ವಿಲ್ಲ, ಉಡಿಗೆಯಿಲ್ಲ. ಬಿಸಿಲೆನ್ನದೆ, ಚಳಿಯೆನ್ನದೆ, ಮಳೆ ಗಾಳಿಗಳಿಗೆ ಜುಮ್ಮೆನ್ನದೆ ಒಂದೇ ಮನದಿಂದ ಶಿವನ ಧ್ಯಾನವನ್ನು ಮಾಡುತ್ತಿದ್ದನು. ಮೊದಮೊದಲು ಗಡ್ಡೆ ಗೆಣಸುಗಳು, ಮುಂದೆ ಬರಿಯ ಹಣ್ಣೆಲೆಗಳು ಇವೇ ಅವನ ಆಹಾರ! ಕೊನೆಗೆ ಆತನು ಅವನ್ನೂ ಬಿಟ್ಟುಬಿಟ್ಟನು. ಹಗಲೂ ಇರುಳೂ ಶಿವಧ್ಯಾನ! ಶಿವಮಂತ್ರ ಜಪ!

ಪರಮೇಶ್ವರನು ಅರ್ಜುನನ ತಪಸ್ಸಿಗೆ ಬೆರಗಾದನು; ಅರಸು ಮಗ; ಎಂಥ ಕಠೋರವಾದ ತಪಸ್ಸು! ಅರ್ಜುನನ ಏಕನಿಷ್ಠೆಯ ಭಕ್ತಿಗೆ ಶಿವನು ಒಲಿದನು; ಆಗ ಆತನ ಬಯಕೆಯನ್ನು ಈಡೇರಿಸಬೇಕೆಂದು ಬಗೆದನು.

ಶಿವನು ಈಗ ಇನ್ನೊಂದು ಕೆಲಸವನ್ನು ಮಾಡಬೇಕಾಗಿತ್ತು. ಅದು ಯಾವದೆಂದರೆ- 'ಮೂಕ' ಎಂಬ ದಾನವನ ವಧೆ. ಆ ದುರುಳನು ಕಾಡ ಹಂದಿಯ ರೂಪವನ್ನು ಧರಿಸಿ ಲೋಕಕ್ಕೆಲ್ಲ ಉಪದ್ರುವ ಮಾಡುತ್ತಿದ್ದನು. ಈ 'ಮೂಕ' ದಾನವನನ್ನು ಸಂಹರಿಸುವದು ಮತ್ತು ಅರ್ಜುನನ ಮೇಲೆ ಅನುಗ್ರಹ ಮಾಡುವದು ಈ ಎರಡೂ ಕಾರ್ಯಗಳನ್ನು ಒಂದೇ ಕಾಲಕ್ಕೆ ಮಾಡಬೇಕೆಂದು ಶಿವನು ಒಂದು ಆಟವನ್ನು ಹೂಡಿದನು. ಅದೇನೆಂದರೆ-"ತಾನು ಬೇಡನ ವೇಷವನ್ನು ಹಾಕಿಕೊಂಡು, ಕಾಡಹಂದಿ ಯಾಗಿ ಇದ್ದ 'ಮೂಕ ದಾನವನನ್ನು ಬೆನ್ನಟ್ಟಿ ಓಡಿಸಿಕೊಂಡು ಇಂದ್ರಕೀಲದ ಕಡೆಗೆ ಹೋಗಬೇಕು, ಅಲ್ಲಿ ಅರ್ಜುನನೊಡನೆ ಕಾಲು ಕೆದರಿ ಜಗಳವನ್ನು ಹೂಡಿ ಆತನ ಸಂಗಡ ಯುದ್ಧ ಮಾಡಬೇಕು; ಆ ಪ್ರಸಂಗದಲ್ಲಿ ಆತನ ಪರಾಕ್ರಮ, ಶಿವಭಕ್ತಿ ಇವನ್ನು ಜಗತ್ತಿಗೆ ತೋರಿಸುವಂತೆ ಮಾಡಬೇಕು."

ಶಿವನು ಬೇಡನ ವೇಷವನ್ನು ಹಾಕಿಕೊಂಡನು; ಆ ಕ್ಷಣವೇ ಪಾರ್ವತಿ ಬೇಡತಿ, ಶಿವನ ಪರಿವಾರದವರೆಲ್ಲ ಬೇಟೆಗಾರರು ಆದರು. ಬಿಲ್ಲುಬಾಣಗಳು, ನಾಯಿಗಳು, ಕೊಂಬು, ಹಲಗೆ ಮುಂತಾದ ವಾದ್ಯ ಗಳು, ಬೇಟೆಗಾರರ ಕೋಲಾಹಲ! ಇಂಥ ಸಡಗರದೊಂದಿಗೆ ಈ ದೊಡ್ಡ ಬೇಡನು ಕಾಡಹಂದಿಯನ್ನು ಬೆನ್ನಟ್ಟಿಕೊಂಡು ಇಂದ್ರಕೀಲದ ಕಡೆಗೆ ನಡೆದಿದ್ದಾನೆ. ಯಾವಾಗ ಅರ್ಜುನನೊಡನೆ ಯುದ್ಧದ ಆಟವನ್ನು

ಹೂಡೇನು, ಅವನಿಗೆ ಕರುಣೆಯನ್ನು ತೋರಿಸೇನು ಎಂದು ಶಬರ ಶಂಕರನಿಗೆ ಆತುರ. . ಶಬರ ಶಂಕರನ ಈ ಲೀಲೆಯನ್ನು ನೋಡಿ ನಲಿಯಬೇಕೆಂದು ದೇವತೆಗಳೆಲ್ಲ ಆಕಾಶದಲ್ಲಿ ನೆರೆದಿದ್ದಾರೆ.

### ಭಾಗ ೨

ಮೊದಲು ಶಬರ ಶಂಕರನು 'ಮೂಕ' ದಾನವನಿಗೆ ಅಂದರೆ ಕಾಡ ಹಂದಿಗೆ ಬಾಣವನ್ನು ಹೊಡೆದನು. ಆ ಬಾಣದಿಂದ ಅದಕ್ಕೆ ಮರಣವೇ ಸಮೀಪಿಸಿತು. ಆ ಪ್ರಾಣ ಸಂಕಟದಲ್ಲಿ ಆ ಕಾಡ ಹಂದಿ ಗೊರಗೊರ ಶಬ್ದವನ್ನು ಮಾಡುತ್ತ ಅರ್ಜುನನು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಸಮೀಪಿಸಿತು.

ಶಿವಧ್ಯಾನದಲ್ಲಿ ಮೈಮರೆತಿದ್ದ ಅರ್ಜುನನು ಈ ಬೇಡರ ಕೋಲಾಹಲ, ಕಾಡ ಹಂದಿಯ ಗೊರಗೊರ ಧ್ವನಿ ಇದಕ್ಕೆ ಕಣ್ದೆರೆದನು. ಕಾಡ ಹಂದಿಯು ತನ್ನ ಬಳಿಗೆ ಬರುವದೆಂದೆನಿಸಿತು. ಅರ್ಜುನನು ಕ್ಷತ್ರಿಯ; ಇದನ್ನು ತಾಳಿಕೊಳ್ಳಲಾರ. ಕೂಡಲೆ ಅದರಮೇಲೆ ಒಂದು ಬಾಣವನ್ನು ಬಿಟ್ಟನು. ಆ ಹಂದಿಯು ಅರ್ಜುನನ ಬಾಣದ ಹೊಡೆತಕ್ಕೆ ಅಲ್ಲಿಯೇ ಸತ್ತುಬಿದ್ದಿತು.

ಶಬರ ಶಂಕರನ ಪರಿವಾರದವರು ಇದು ತಾವು ಹೊಡೆದ ಬೇಟೆ ಎಂದು ಆ ಹಂದಿಯನ್ನು ಒಯ್ಯತೊಡಗಿದರು. ಅರ್ಜುನನು 'ಇದನ್ನು ನಾನು ಹೊಡೆದಿದ್ದೇನೆ; ಇದು ನಿಮ್ಮದಲ್ಲ, ಒಯ್ಯಬೇಡಿರಿ' ಎಂದನು. ಮಾತಿಗೆ ಮಾತು ಬೆಳೆಯಿತು, ಕೈಗೆ ಕೈ ಹತ್ತಿತು.

ಶಬರ ಶಂಕರ:— ಎಲೋ ನೀನೆಂಥ ತಪಸ್ವಿ! ತಪಸ್ಸು ಮಾಡುವ ನಿನಗೆ ಬೇಟೆಯೇಕೆ? ಬಿಲ್ಲು ಬಾಣಗಳೇಕೆ?

ಅರ್ಜುನ:— ಎಲೋ, ಮೊಲ ಚಿಗರೆ ಮೊದಲಾದ ಸಣ್ಣ ಪುಟ್ಟ ಮೃಗಗಳ ಬೇಟೆ ಆಡಿ ಕಾಲ ಹಾಕುವ ಬೇಡನೆ ನಮ್ಮ ಗೊಡವೆ ನಿನಗೇಕೆ? ನಾನು ಯಾರೆಂದು ತಿಳಿದೆ?

ಶಬರ ಶಂಕರ:— ನೀನು ಯಾರೇ ಇರು. ನಿನ್ನ ಈ ಬಿಂಕದ ನುಡಿಗೆ ಬೆದರುವ ಬೇಡನಲ್ಲ ನಾನು; ಬಿಲ್ಲು ಬಾಣಗಳ ಬಡಿವಾರಕ್ಕೆ ಸೊಪ್ಪು ಹಾಕುವ ಬೇಡನಲ್ಲ ನಾನು!

ಅರ್ಜುನ:—ಎಲೋ ಅಲ್ಪನೇ ಸುಮ್ಮನೆ ಬದುಕಿಕೊಂಡು ಹೋಗು; ನಿನ್ನ ಪರಿವಾರವು ದೊಡ್ಡದಿದೆ; ನಿನ್ನ ತರುವಾಯ ಅದರ ಗತಿ ಏನೆಂಬದನ್ನು ಆಲೋಚಿಸಿರುವೆಯಾ?

ಶಬರ ಶಂಕರ—ನಮ್ಮವರ ಚಿಂತೆ ನಿನಗೆ ಬೇಡ; ಆಗಿ ಹೋಗಲಿ ಒಮ್ಮೆ ನಿಮ್ಮ ನಮ್ಮ ನಡುವೆ ಕಾಳಗ!

ಅರ್ಜುನನಿಗೂ ಶಬರ ಶಂಕರನಿಗೂ ಬಿಲ್ಲು ಬಾಣಗಳ ಯುದ್ಧವು ನಡೆಯಿತು. ಅರ್ಜುನನ ಆಟವು ಸಾಗದಂತಾಯಿತು; ಶಬರನು ಬಾಣ ಬಿಟ್ಟು ಅರ್ಜುನನ ಬಿಲ್ಲನ್ನೇ ಕತ್ತರಿಸಿಬಿಟ್ಟನು. ಅದರಲ್ಲಿಯೂ ಅರ್ಜುನ ನಿಗೆ ಸೋಲು, ಎಂಥ ಸೋಲು, ಹೆಚ್ಚಿನ ಸೋಲು! ಶಬರ ಶಂಕರನು ಅರ್ಜುನನನ್ನು ನೆಲಕ್ಕೆ ಕೆಡವಿ ಸ್ವಲ್ಪ ತುಳಿದನು; ಅಷ್ಟಕ್ಕೆ ಅರ್ಜುನನ ಬಾಯೊಳಗಿಂದ ರಕ್ತವು ಸುರಿಯಿತು; ಮೂಗಿನ ಹೊರಳೆಗಳು ಹಿಡಿಸದಷ್ಟು ಉಸಿರು ಬರತೊಡಗಿತು. ಆತನು ತೀರ ಹಣ್ಣಾದನು. •

ಈಗ ಅರ್ಜುನನು ನಿಜವಾಗಿ ಗಾಬರಿಯಾದನು. 'ನನ್ನಂಥ ವೀರ ನನ್ನು ಸೋಲಿಸುವ ಬೇಡನೆಂದರೆ ಈತನು ಸಾಮಾನ್ಯ ಬೇಡನಲ್ಲ, ಎಂದು ತಿಳಿದನು. ಆದರೂ ಅರ್ಜುನನು ಪೂರ್ಣ ಎದೆಗುಂದಲಿಲ್ಲ. "ನನ್ನ ದೇವನಾದ ಮಹಾದೇವನ ಬಲವೊಂದು ನನಗೆ ನೆರವಾಗಿ ಇರುವದಲ್ಲ, ಅದನ್ನು ನಾನು ಈಗ ಪಡೆಯಬೇಕು. ಈ ಸಂಕಟದಲ್ಲಿ ಸಹಾಯವನ್ನು ಮಾಡೆಂದು ಆತನಿಗೆ ಮೊರೆಯಿಡಬೇಕು;ಆ ದಯಾಳು ಪರಶಿವನು ನನಗೆ ಸೋಲಿನ ಅಪಮಾನವನ್ನು ತರಲಾರನು. ಈಗಲೇ ಮಿಂದು ಮಡಿಯಾಗಿ ಆತನನ್ನು ಪೂಜಿಸುವೆನು" ಎಂದು ನಿಶ್ಚಯಿಸಿ ದನು; ಸ್ವಲ್ಪಹೊತ್ತು ತಾಳು ಎಂದು ಬೇಡನಿಗೆ ಹೇಳಿದನು.

ಅರ್ಜುನನು ಅಲ್ಲಿಯೇ ಹರಿಯುತ್ತಿರುವ ನೀರಿನ ಝುರಿಯಲ್ಲಿ ಮಿಂದು ಮಡಿಯಾದನು. ಅಲ್ಲಿಯೇ ಒಂದು ಮಳಲಿನ ಲಿಂಗವನ್ನು ಮಾಡಿಕೊಂಡನು. ಸಮೀಪದ ಹೂ ಪತ್ರಿಗಳನ್ನು ತಂದನು. "ಪರಮೇಶ್ವರಾ, ನಿನ್ನ ಭಕ್ತನಾದ ನನಗೆ ಒಬ್ಬ ಬೇಡನಿಂದ ಸೋತನೆಂಬ ಅಪಮಾನವನ್ನು ತರುವೆಯಾ? ನಿನ್ನ ಕರುಣೆಯೊಂದು ಇರಲಿ, ಈ ಬೇಡನನ್ನು ಒಂದು ಕ್ಷಣದಲ್ಲಿ ಸೋಲಿಸುವೆನು" ಎಂದು ಬೇಡಿಕೊಂಡು

ಶಿವನನ್ನು ಹೂವುಗಳಿಂದ ಪೂಜಿಸತೊಡಗಿದನು. ಅರ್ಜುನನು ತಾನು ಹೂವು ಏರಿಸಿದ ಶಿವಲಿಂಗವನ್ನು ನೋಡುತ್ತಾನೆ, ಅದರ ಮೇಲೆ ಹೂವುಗಳೇ ಇಲ್ಲ. ಸೋಜಿಗ! ಅತ್ಯಂತ ಸೋಜಿಗ!! ಹೊರಳಿ ನೋಡುತ್ತಾನೆ — ಬೇಡನ ತಲೆಯ ಮೇಲೆ ತಾನು ಲಿಂಗಕ್ಕೇರಿಸಿದ ಹೂವುಗಳು! ಮತ್ತೆ ಲಿಂಗಕ್ಕೆ ಹೂವುಗಳನ್ನು ಏರಿಸುತ್ತಾನೆ; ಅವೇ ಹೂವು ಮತ್ತೆ ಬೇಡನ ತಲೆಗೆ ಹೋಗುತ್ತವೆ!

ಅರ್ಜುನನ ಕಣ್ಣಿನ ಮಬ್ಬು ಹರಿಯಿತು; ಆತನ ಮನಸ್ಸಿಗೆ ಹೀಗೆ ಹೊಳೆಯಿತು- "ಈತನು ಬೇಡನಲ್ಲ; ನಾನು ಪೂಜಿಸುತ್ತಿದ್ದ ಪರಶಿವನೇ ಈತನು! ಅಯ್ಯೋ ನನ್ನ ದೇವನೊಡನೆ ಯುದ್ಧವೇ!" ಎಂದು ಆಗ ಅರ್ಜುನನು ಓಡುತ್ತ ಬಂದು ಶಬರ ಶಂಕರನ ಪಾದಕ್ಕೆ ಎರಗಿದನು. ಶಬರ ಶಂಕರನು ಆತನನ್ನು ಅಪ್ಪಿಕೊಂಡನು. ಪಾರ್ವತಿಯು ಅರ್ಜುನನ ಗಾಯಗೊಂಡ ಮೈಮೇಲೆ ಕೈಯಾಡಿಸಿದಳು. ಶಿವನ ಪರಿವಾರದವರು ಆನಂದದಿಂದ ಕುಣಿದಾಡಿದರು; ದೇವತೆಗಳು ಹೂಗಳ ಮಳೆಯನ್ನು ಸುರಿದರು!

ಶಿವನು ತನ್ನ ನಿಜರೂಪವನ್ನು ತೋರಿ, ಅರ್ಜುನನಿಗೆ 'ಪಾಶುಪತ' ಎಂಬ ದಿವ್ಯ ಅಸ್ತ್ರವನ್ನು ದಯಪಾಲಿಸಿ ಅನುಗ್ರಹ ಮಾಡಿದನು. ಅರ್ಜುನನು ಧನ್ಯನಾದನು.

ಮುಂದೆ ಕೌರವರಿಗೂ ಪಾಂಡವರಿಗೂ ಯುದ್ಧವಾಯಿತು ಆ ಯುದ್ಧದಲ್ಲಿ ಪಾಂಡವರಿಗೆ ಪಾಶುಪತಾಸ್ತ್ರದಿಂದ ಬಹಳ ಉಪಯೋಗ ವಾಯಿತು.

**ಅಭ್ಯಸನೆಗಳು:—**

೧. ವ್ಯಾಸ ಋಷಿಗಳು ಧರ್ಮರಾಜನಿಗೆ ಯಾವ ಮಾತನ್ನು ಹೇಳಿದರು?
೨. ಅರ್ಜುನನು ತಪಸ್ಸಿಗಾಗಿ ಎಲ್ಲಿಗೆ ಹೊರಟನು?
೩. ಅವನು ಯಾವ ರೀತಿಯಿಂದ ತಪಸ್ಸು ಮಾಡತೊಡಗಿದನು?
೪. ಶಿವನು ಬೇಡನ ವೇಷವನ್ನು ಹಾಕಿಕೊಂಡು ಇಂದ್ರಕೀಲ ಪರ್ವತಕ್ಕೆ ಯಾಕೆ ಹೋದನು?
೫. ಆ ಕಾಡುಹಂದಿಗೆ ಮೊದಲು ಯಾರು ಬಾಣವನ್ನು ಹೊಡೆದರು?
೬. ಯಾರ ಬಾಣದ ಹೊಡೆತಕ್ಕೆ ಆ ಹಂದಿಯು ಸತ್ತುಬಿದ್ದಿತು?

೭. ಶಬರ ಶಂಕರನಿಗೂ ಅರ್ಜುನನಿಗೂ ಜಗಳವೇಕೆ ಆರಂಭವಾಯಿತು?
೮. ಯಾರಿಗೆ ಸೋಲು ಬಂದಿತು?
೯. ಅರ್ಜುನನು ಯಾರ ಪೂಜೆ ಮಾಡತೊಡಗಿದನು?
೧೦. ಆ ಬೇಡನು ಶಿವನೇ ಎಂದು ಅರ್ಜುನನಿಗೆ ಹೇಗೆ ತಿಳಿಯಿತು?
೧೧. ಶಿವನು ಅರ್ಜುನನಿಗೆ ಯಾವ ಅಸ್ತ್ರವನ್ನು ದಯಪಾಲಿಸಿದನು?
೧೨. ಕೆಳಗಿನ ಗುಂಪುಗಳಲ್ಲಿ ಒಂದು ಶಬ್ದವು ತಪ್ಪಿ ಸೇರಿದೆ; ಅದನ್ನು ಹುಡುಕಿ ಸರಿಯಾದ ಗುಂಪಿಗೆ ಸೇರಿಸಿರಿ:—

| | | |
|---|---|---|
| ಪಾರ್ವತಿ | ಸೈನ್ಯ | ತಾವರೆ |
| ದಳ | ಕಮಲ | ಜಲಜ |
| ಗಿರಿಜೆ | ದಂಡು | ಭವಾನಿ |

೧೩. ಕೆಳಗೆ ಕೊಟ್ಟ ಜೋಡು ಶಬ್ದಗಳ ಅರ್ಥ ಹೇಳಬಲ್ಲಿರಾ?
ಬೇಡ, ಬೇಡತಿ, ಗವಳಿಗ, ಗವಳಗಿತ್ತಿ, ಗೌಡ, ಗೌಡಶಾನಿ

# ೧೮ ಜೋಳದ ಆತ್ಮಕಥೆ

ವೀರಭದ್ರಪ್ಪನವರು ಊರಿಗೆ ಸಮೀಪದಲ್ಲಿರುವ, ತಮ್ಮ ಎರೆ ಹೊಲಕ್ಕೆ, ಸಾಯಂಕಾಲ ತಮ್ಮ ಚಿಕ್ಕ ಮಗ ನಾಗಭೂಷಣನನ್ನು ಕರೆದುಕೊಂಡು ಹೋಗಿದ್ದರು. ಆಗ ಮಾಘಮಾಸ. ಬೇಸಗೆಯು ಅದೇ ಆರಂಭವಾಗಿತ್ತು. ಹೊಲದಲ್ಲಿ ಬಿಳಿ ಜೋಳವು ಬೆಳೆದು ನಿಂತಿತ್ತು. ತೆನೆಗಳು ಚೆನ್ನಾಗಿ ಕಾಳು ಹಿಡಿದಿದ್ದವು; ಬೆಳಸಿಗೆ ಬಂದಿದ್ದವು. ವೀರಭದ್ರಪ್ಪನವರು ಬೆಳಸಿ ತೆನೆಗಳನ್ನು ಸುಡಲಿಕ್ಕೆ ಆಳುಮಗನಿಗೆ ಹೇಳಿದರು. ಅವನು ಉತ್ತಮವಾದ ತೆನೆಗಳನ್ನು ಆರಿಸಿ ತಂದು, ಸುಟ್ಟು, ಕಾಳು ಉದುರಿಸಿ, ಜಳಜಳ ಮಾಡಿ ಅವರಿಗೆ ತಿನ್ನಲಿಕ್ಕೆ ಕೊಟ್ಟನು.

ನಾಗಭೂಷಣನು ಮನೆಯಿಂದ ತಂದ ಚಟ್ನಿ, ಬೆಲ್ಲ, ಹಸಿಕೊಬ್ಬರಿ ಇವುಗಳೊಡನೆ ಅವರು ಸೀ ತೆನೆಗಳನ್ನು ತಿನ್ನ ಹತ್ತಿದರು. ಕಾಳು ಬಲು ರುಚಿಕರವಾಗಿದ್ದವು. ಸಾಕಾಗುವಷ್ಟು ತಿಂದರು. ಆ ಮೇಲೆ ತಂದೆ ಮಕ್ಕಳು ಮನೆಗೆ ಬಂದರು. ದಾರಿ ನಡೆದು ದಣಿದ ನಾಗಭೂಷಣನು ಮಲಗಿದನು. ಅವನಿಗೆ ಕೂಡಲೆ ನಿದ್ದೆ ಹತ್ತಿತು. ಅವನು ಒಂದು ಕನಸು ಕಂಡನು. ಕನಸಿನಲ್ಲಿ ಬಿಳಿಜೋಳದ ನಿಲವು ಕಂಡಿತು. ಜೋಳವು— 'ತಮ್ಮಾ, ನನ್ನ ಕಥೆಯನ್ನು ಕೇಳು' ಎಂದು ಮಾತಾಡತೊಡಗಿತು.



"ನಾನು ಒಣಗಿದ ಮೇಲೆ, ನನಗೆ ಬಿಳಿ ಜೋಳವೆನ್ನುತ್ತಾರೆ. ಅಂತಹ ನನ್ನನ್ನು ನಿಮ್ಮ ಆಳುಮಕ್ಕಳು ನಿಮ್ಮ ಹೊಲದಲ್ಲಿ ಆಶ್ವಿನ ಮಾಸದಲ್ಲಿ ಸೀಗೆ ಹುಣ್ಣಿವೆ ಮಾಡಿ ಬಿತ್ತುವರು. ಕಾರ್ತಿಕದಲ್ಲಿ ಗೌರೀ ಹುಣ್ಣಿವೆ ಮಾಡಿ, ನಾನು ಗೇಣುದ್ದ ಬೆಳೆದೆನು. ಅಷ್ಟರಲ್ಲಿ ನನ್ನಕೂಡ ಹುಲ್ಲು, ಕರಿಕೆ ಬೆಳೆಯತೊಡಗಿದ್ದವು.



ಅವು ನನ್ನ ಬೆಳವಣಿಗೆಗೆ ಅಡ್ಡಿ ಮಾಡುವದನ್ನು ಕಂಡು ನಿಮ್ಮ ಆಳುಮಕ್ಕಳು ಎಡೆಹೊಡೆದು ಕರಿಕೆಹುಲ್ಲನ್ನು ತೆಗೆದರು. ಆಮೇಲೆ ನಾನು ಆತಂಕವಿಲ್ಲದೆ ಬೆಳೆದೆನು.

ನನಗೆ ಇನ್ನು ಮಳೆ ಬೇಕು ಎನಿಸಲಿಲ್ಲ. ಮೂಡಗಾಳಿಗೆ ನಾನು ಬೆಳೆಯುತ್ತ ಹೋದೆನು. ಎದೆಯುದ್ದ ಬೆಳೆದೆನು; ಹೊಡೆಬಿಚ್ಚಿ ತೆನೆಯಾದೆನು, ಹಾಲುಗಾಳಾದೆನು, ಬೆಳಸಿಯಾದೆನು. ನಿನ್ನೆ ನೀನು ನಿಮ್ಮಪ್ಪನ ಕೂಡ ಬಂದು ನಮ್ಮನ್ನು ಕೊಯ್ದಿದೆ, ಸುಡಿಸಿದೆ, ತಿಕ್ಕಿಸಿದೆ, ಬೆಲ್ಲದೊಡನೆ ಬೆರಸಿ ತಿಂದುಬಿಟ್ಟೆ, ಆನಂದ ಪಟ್ಟೆ, ಹೊಟ್ಟೆ ತುಂಬಿಕೊಂಡೆ. ದಿನಾಲು ಸೀ ತೆನೆಗಳನ್ನು ತಿಂದು ಮಜ್ಜಿಗೆ ಕುಡಿದರೆ ಜನರಿಗೆ ಬಣ್ಣ ಬದಲಾಗುವದಂತೆ, ಕಳೆಯೇರುವದಂತೆ, ಕಸುವು ಬರುವದಂತೆ! ಮುಂದೆ ಬಿಸಿಲಿನ ಹೊಡೆತಕ್ಕೆ ನಾನು ಬಿರುಸಾಗುತ್ತ ನಡೆಯುವೆನು. ನನ್ನ ಸೊಪ್ಪೆಯೂ ಒಣಗುವದು.



ಫಾಲ್ಗುಣದಲ್ಲಿ ಕೋಲಿಗಳು ಉಳಿಯುವಂತೆ ಕೊಯ್ದು ಗೂಡು ಹಾಕುವರು. ಸ್ವಲ್ಪ ದಿವಸ ಬಿಟ್ಟು ಕಣ ಮಾಡುವರು. ತೆನೆಗಳನ್ನು ಕೊಯ್ದು ಅವುಗಳನ್ನು ಕಣದಲಿ ಸುರಿಯುವರು.



ಆ ಮೇಲೆ ಹಂತಿ ಕಟ್ಟಿ ತೆನೆಗಳನ್ನು ದನಗಳಿಂದ ತುಳಿಸುವರು. ಹಂತಿ ತಿರುಗುವಾಗ ಬಲು ಇಂಪಾದ ಹಾಡುಗಳನ್ನು ಹಾಡುವರು. ಹಂತಿ ನುರಿತಮೇಲೆ ಸುಂಕರಾಶಿ ಮಾಡುವರು. ಗಾಳಿ ಬಿಟ್ಟಕೂಡಲೆ ಸುಂಕರಾಶಿಯನ್ನು ತೂರುವರು. ಸಳ್ಳು ಹೊಡೆದು ಸ್ವಚ್ಛಮಾಡುವರು. ಇತ್ತ ಗೋರೆ ಹಲ್ಲಿನಿಂದ ಕಂಕಿಗಳನ್ನು ಬೇರೆ ಕಡೆಗೆ ಎಳೆಯುವರು. ಹಸನಾದ ಕಾಳನ್ನು ಗೋರೆಯಿಂದ ಮೇಟಿಯ ಸುತ್ತಲು ಎಳೆದು ಕೂಡಹಾಕಿ ರಾಸಿ ಮಾಡುವರು.



ಆ ಮೇಲೆ ರಾಸಿಯನ್ನು ಪೂಜಿಸಿ, ಎಡೆ ತೋರಿಸಿ, ಎಲ್ಲರೂ ಕಣದಲ್ಲಿಯೇ ಊಟ ಮಾಡುವರು. ಕಣಕ್ಕೆ ಬಂದ ಆಯಗಾರರಿಗೆ, ಜೋಗಿ, ಜಂಗಮರಿಗೆ ಕಾಳು ಕೊಡುವರು. ಇಷ್ಟಾದ ಮೇಲೆ ಕಾಳನ್ನು ಚಕ್ಕಡಿಯಲ್ಲಿ ಹೇರಿತಂದು ಹಗೆಂಗಲ್ಲಿ ಹಾಕುವರು.

ನಮ್ಮ ಕನ್ನಡ ದೇಶದ ಬಹು ಭಾಗದಲ್ಲಿ ಜೋಳವನ್ನು ಹೆಚ್ಚಾಗಿ ಬೆಳೆಯುವರು. ಜೋಳವೆಂದರೆ ಎಲ್ಲರಿಗೂ ಅಚ್ಚುಮೆಚ್ಚು. ಜೋಳದ ರೊಟ್ಟಿಯನ್ನು, ನುಚ್ಚನ್ನು, ಅಂಬಲಿಯನ್ನು, ಕಿಚ್ಚಡಿಯನ್ನು ಮತ್ತು ಮುದ್ದಿಯನ್ನು ಮಾಡಿಕೊಂಡು ತರತರದ ರಸ, ಕಾಯಿಪಲ್ಯೆಗಳೊಡನೆ ತಿಂದು ಸುಖಪಡುವರು. ಅಂದ ಮೇಲೆ ಗೋದಿ, ಸಜ್ಜೆ, ಅಕ್ಕಿಗಳ ನೆನಪೇ ಜನರಿಗಾಗುವದಿಲ್ಲ. ಅವು ಎಂದಾದರೊಮ್ಮೆ ಜನರಿಗೆ ಬೇಕಾಗುತ್ತವೆ. ಜೋಳವು ಮಾತ್ರ ನಿತ್ಯಬೇಕು. ಇದರಿಂದ ಜೋಳದ ಮಹತ್ವವೆಷ್ಟೆಂಬದನ್ನು ನೀನೇ ಊಹಿಸು. ಜೋಳವನ್ನು ಚೆನ್ನಾಗಿ ಬೆಳೆಸಿ, ಜೋಪಾನಮಾಡು; ಕೆಡಿಸಬೇಡ, ನಾಶಮಾಡಬೇಡ, ನುಸಿಗಳು ತಿನ್ನದಂತೆ ನೋಡಿಕೋ," ಎಂದು ಹೇಳಿ ಬಯಲಾಯಿತು.

ನಾಗಭೂಷಣನು ಎಚ್ಚತ್ತನು; ಬೆಳಗಾಗಿತ್ತು. ಜೋಳವು ಹೇಳಿದ ಮಾತುಗಳನ್ನು ನೆನಪಿಟ್ಟುಕೊಂಡು, ದಿನಾಲು ಬೆಳಸಿ ತಿಂದು ಅಡ್ಡಾಡಿ ಬಂದು, ಮಜ್ಜಿಗೆ ಕುಡಿಯತೊಡಗಿದನು; ಅದರಿಂದ ಶಕ್ತಿವಂತನಾದನು.

**ಅಭ್ಯಸನಗಳು:—**

೧. ಬಿಳಿ ಜೋಳವನ್ನು ಯಾವ ತಿಂಗಳಲ್ಲಿ ಬಿತ್ತುವರು?

೨. ಎಡೆ ಹೊಡೆಯುವದರ ಉಪಯೋಗವೇನು?

೩: ಎಷ್ಟು ತಿಂಗಳಲ್ಲಿ ಬೆಳಸಿಗಳಾಗುತ್ತವೆ?

೪. ಜೋಳವನ್ನು ಯಾಕೆ ಕಾಪಾಡಬೇಕು?

೫. ಜೋಳದ ಬೆಳೆಯಿಂದ ನಮಗೆ ಆಗುವ ಉಪಯೋಗವನ್ನು ಕುರಿತು ಹತ್ತು ವಾಕ್ಯಗಳನ್ನು ಬರೆಯಿರಿ.

೬ ಬಿಳಿಜೋಳವು ತನ್ನ ಕಥೆಯನ್ನು ತಾನೇ ಹೇಳಿದಂತೆ ಇನ್ನೊಮ್ಮೆ ಹೇಳಿರಿ.

## ೨೦. ನೀರು ಕಣ್ಣೀರು

ರಾಗ:— ಪೀಲು; ಏಕತಾಳ

ಮುಂಜಾವದಲೇ ಹರಿಜನ ಮುದುಕೆಯು
ಬಾವಿಯ ದಡದಲಿ ಕುಳಿತಿಹಳು;
"ಅಣ್ಣಾ, ಅಕ್ಕಾ ಮಗಳಿಗೆ ನೀರನು
ಹನಿಸಿರಿ," ಎಂದೊರಲುತಿಹಳು! ॥ ೧ ॥

ಬಡಬಡ ಬರುವರು ದಡದಡ ಇಳಿವರು
ನೀರೊಯ್ವರು ದೈವುಳ್ಳವರು!
ದುರ್ದೈವಿಗೆ ಸರಿ, ಸರಿ, ನಿಲ್ ದೂರೆಂಬರು,
ನಡೆವರು! ಇರುವರೆ ದಯವುಳ್ಳವರು? ॥ ೨ ॥

ಹನಿಸಲು ಒಪ್ಪರು, ತುಂಬಲು ಬಿಡರು,
ಕರುಣೆಯ ಕಾಣಳು ಆ ಮುದುಕೆ
ಜಗಕೆಲ್ಲಕೆ ಹರಿ ನೀಡಿದ ನೀರು
ಹರಿಜನಕಿಲ್ಲವೆ ಕುಡಿವುದಕೆ? ॥ ೩ ॥



ಕಾಯ್ದೂ, ಕಾಯ್ದೂ ಹಲುಬೀ, ಹಲುಬೀ
ಏರಿತು ಏರಿಳಿಯಿತು ಹೊತ್ತು!
ಮುದುಕೆಯ ಹಿಟ್ಟಿಗೆ ಒಣಗಿದ ಬಾಯಿಗೆ
ಅವಳದೆ ಬಿಸಿ ಕಂಬನಿ ಬಿತ್ತು! ॥ ೪ ॥

ಅಭ್ಯಸನಗಳು:—

೧. ಹರಿಜನ ಮುದುಕೆಯು ಎಲ್ಲಿಕುಳಿತಿದ್ದಳು? ಜನರಿಗೆ·ಏನೆಂದು.ಬೇಡುತ್ತಿದ್ದಳು?
೨. ಜನರು ಆಕೆಯ ಸಂಗಡ ಹೇಗೆ ನಡೆದುಕೊಂಡರು?
೩. ದೈವುಳ್ಳವರು ಯಾರು?
೪. ಆ ಮುದುಕೆ ದುರ್ದೈವಿ ಯಾಕೆ?
೫. ಕೆಳಗಿನ ಸಾಲುಗಳ ಅರ್ಥ ತಿಳಿಸಿ ಹೇಳಿರಿ:—
ಅ) ಜಗಕೆಲ್ಲಕೆ ಹರಿ ನೀಡಿದ ನೀರು
ಹರಿಜನಕಿಲ್ಲವೆ ಕುಡಿವುದಕೆ?
ಆ) ಮುದುಕೆಯ ಹಿಟ್ಟಿಗೆ ಒಣಗಿದ ಬಾಯಿಗೆ
ಅವಳದೆ ಬಿಸಿ ಕಂಬನಿ ಬಿತ್ತು!

# ೨೧. ಸಾಲೆಯ ತೋಟ




ಆಗ ಆಷಾಢಮಾಸ. ಸಂಜೆಯ ನಾಲ್ಕು ಗಂಟೆಯ ಸಮಯ. ಮೂರನೆಯ ವರ್ಗದ ಹಿರಿಯಮಣಿಯಾದ ಗುರುಪಾದನು ಗುರುಗಳ ಅಪ್ಪಣೆಯಂತೆ ಬಾಲಕರನ್ನು ಸಾಲೆಯ ತೋಟಕ್ಕೆ ಕರೆದುಕೊಂಡು ನಡೆದನು. ಗುರುಗಳೂ ಅವರನ್ನು ಹಿಂಬಾಲಿಸಿದರು. ಮಕ್ಕಳು ತಮಗಾಗಿ ಗೊತ್ತುಪಡಿಸಿದ ಸ್ಥಳಕ್ಕೆ ಬಂದರು.

ಗುರುಪಾದ:— ಗುರುಗಳೇ, ಈ ಹೊತ್ತು ನಾವು ಯಾವ ಬೀಜಗಳನ್ನು ಬಿತ್ತೋಣ?

ಗುರು:— ಗುರುಪಾದಾ, ಸ್ವಲ್ಪ ತಡೆ. ಇದೇ ಈಗ ತೋಟಿಗ ಚೆನ್ನನು ನೀರು ಹನಿಸುವ ಜರಜರಿಗಳನ್ನೂ, ಬೀಜಗಳನ್ನೂ ತರುವನು; ಆ ಮೇಲೆ ಹೇಳುವೆನು. ಮಕ್ಕಳೇ, ಹೋದಸಾರೆ ತೋಟದ ಕೆಲಸವಿದ್ದಾಗ ನೀವು ಏನೇನು ಮಾಡಿದಿರಿ?

ಸಂಗ:— ಗುರುಗಳೇ, ನಾವು ಮಡಿಗಳನ್ನು ಮಾಡಿದೆವು. ಮೊದಲು ಗುದ್ದಲಿಯಿಂದ ನೆಲವನ್ನು ಚೆನ್ನಾಗಿ ಅಗೆದೆವು. ಬಳಿಕ ದೊಡ್ಡ ಹೆಂಟೆಗಳನ್ನು ಒಡೆದೆವು; ಕೊನೆಗೆ ಗೊಬ್ಬರವನ್ನು ಬೆರಸಿ ಕುರ್ಚಿಗೆಗಳಿಂದ ಸರಿಯಾಗಿ ಮಡಿಗಳನ್ನು ಮಾಡಿದೆವು.

ಗುರು:— ಗುರುಪಾದಾ, ನೆಲವನ್ನು ಅಗೆದು ಯಾಕೆ ಪೊಳ್ಳು ಮಾಡಬೇಕು? ಹೇಳು, ನೋಡುವಾ!

ಗುರುಪಾದ:— ಗುರುಗಳೇ, ಗಿಡಗಳ ಬೇರುಗಳು ನೆಲದಲ್ಲಿ ಬಹಳ ದೂರದವರೆಗೆ ಹೋಗುತ್ತವೆ. ಬೇರುಗಳು ಹಬ್ಬಲಿಕ್ಕೆ ಸರಿಯಾಗಿ ಸ್ಥಳವು ಸಿಕ್ಕದಿದ್ದರೆ, ಗಿಡವು ಚೆನ್ನಾಗಿ ಬೆಳೆಯುವದಿಲ್ಲ; ಇದಲ್ಲದೆ ಬೇರುಗಳಿಂದಲೇ ಗಿಡಕ್ಕೆ ಆಹಾರವು ಸಿಕ್ಕುತ್ತದೆ. ಅದಕ್ಕಾಗಿ ನೆಲವನ್ನು ಅಗೆದು ಪೊಳ್ಳು ಮಾಡಬೇಕು. ನೆಲವು ಪೊಳ್ಳು ಇದ್ದರೆ ಬೇರುಗಳು ಪಸರಿಸಲಿಕ್ಕೆ ಹೆಚ್ಚು ಅನುಕೂಲವಾಗುವದು.

ಗುರು:— ಗುರುಪಾದಾ, ನೀನು ಹೇಳಿದ್ದು ಸರಿ. ಅಗೋ! ನೋಡು. ತೋಟಿಗ ಚೆನ್ನನು ಬಂದನು; ಬೀಜಗಳನ್ನೂ, ಜರಜರಿ ಗಳನ್ನೂ ತಂದನು. ಚೆನ್ನಾ, ಏತರ ಬೀಜಗಳನ್ನು ತಂದೆ?

ಚೆನ್ನ:— ಮೂಲಂಗಿ ಮತ್ತು ತಿಂಗಳವರೆಯ ಬೀಜಗಳನ್ನು ತಂದಿರುವೆನು.

ಗುರುಗಳು ಎಲ್ಲ ಹುಡುಗರಿಗೂ ಬೀಜಗಳನ್ನು ಕೊಡುವರು. ಅವುಗಳನ್ನು ಹಾಕುವ ರೀತಿಯನ್ನು ತೋರಿಸುವರು. ಮಕ್ಕಳು ತಮ್ಮ ತಮ್ಮ ಮಡಿಗಳಲ್ಲಿ ಬೀಜಗಳನ್ನು ಹಾಕುವರು. ತೋಟದಲ್ಲಿಯ ಹೌದಿನೊಳಗಿನ ನೀರನ್ನು ಜರಜರಿಯಲ್ಲಿ ತುಂಬಿಕೊಂಡು ಬಂದು ಮಡಿಗಳಿಗೆ ಹಾಕುವರು.

ಸಂಗ:— ಗುರುಗಳೇ, ಮೂಲಂಗಿ ಮತ್ತು ತಿಂಗಳವರೆಯ ಬೀಜಗಳು ಎಷ್ಟು ದಿವಸಕ್ಕೆ ಮೊಳಕೆ ಒಡೆಯುತ್ತವೆ?

ಗುರು:— ಸಂಗಾ, ಮೂಲಂಗಿ ನಾಲ್ಕು ಅಥವಾ ಐದು ದಿವಸಕ್ಕೆ, ತಿಂಗಳವರೆ ಐದು ಅಥವಾ ಆರು ದಿವಸಕ್ಕೆ ಮೊಳಕೆ ಒಡೆಯುತ್ತವೆ.

ಮಲ್ಲ:— ಗುರುಗಳೇ, ಮೂಲಂಗಿಯ ಗಡ್ಡೆಗಳೂ, ತಿಂಗಳವರೆಯ ಕಾಯಿಗಳೂ ನಮಗೆ ಎಂದು ಸಿಗುತ್ತವೆ?

ಗುರು:- ಮಲ್ಲಾ, ಮೂಲಂಗಿಯ ಗಡ್ಡೆಯು ಚೆನ್ನಾಗಿ ಬೆಳೆಯಲಿಕ್ಕೆ ಸುಮಾರು ೪೦ ದಿವಸಗಳು ಬೇಕು ತಿಂಗಳವರೆಗಳು ಒಂದು ತಿಂಗಳಾದ ಮೇಲೆ ಕಾಯಿಗಳಾಗುವವು. ಆದದರಿಂದ ಅವಕ್ಕೆ ತಿಂಗಳವರೆ ಎಂದೆನ್ನು ತ್ತಾರೆ. ಈ ಹೊತ್ತು ನಾವು ಬೀಜಹಾಕಿದ ದಿನವನ್ನು ಒರೆದು ಇಡೋಣ. ಮುಂದೆ ಮೂಲಂಗಿಯನ್ನು ಕೀಳುವಾಗ ತಿಂಗಳವರೆಯ ಕಾಯಿಗಳನ್ನು

ಹರಿಯುವಾಗ ಎಷ್ಟು ದಿನಗಳಾದವೆಂಬುದು ನಿಮಗೆ ಚೆನ್ನಾಗಿ ಮನವರಿಕೆಯಾಗುತ್ತದೆ. ನಡೆಯಿರಿ, ತೋಟದಲ್ಲಿ ತಿರುಗಾಡಿ ಬರೋಣ.

ಗುರುಗಳು ಮಕ್ಕಳಿಗೆ ಶಾಲೆಯ ತೋಟವನ್ನು ತೋರಿಸುತ್ತ ಎಲ್ಲ ಕಡೆಗೂ ಅಡ್ಡಾಡಿಸಿಕೊಂಡು ಬಂದರು. ಮಕ್ಕಳು ತೋಟದಲ್ಲಿ ತಾವು ಬೆಳೆಸಿದ ತರತರದ ಕಾಯಿಪಲ್ಯೆಗಳನ್ನೂ ಚಿತ್ರವಿಚಿತ್ರವಾದ ಹೂಗಿಡಗಳನ್ನೂ ಮತ್ತು ನಾನಾ ತರದ ಹಣ್ಣಿನ ಗಿಡಗಳನ್ನೂ ನೋಡಿ ನಲಿದಾಡಿದರು.

**ಅಭ್ಯಸನಗಳು:—**

೧. ಮಕ್ಕಳು ತೋಟದಲ್ಲಿ ಯಾವ ಬೀಜಗಳನ್ನು ಹಾಕಿದರು?
೨. ಮೂಲಂಗಿ ಮತ್ತು ತಿಂಗಳವರೆಗಳು ಎಷ್ಟು ದಿವಸಕ್ಕೆ ಮೊಳಕೆ ಒಡೆಯುತ್ತವೆ?
೩. ತೋಟದಿಂದ ಉಪಯೋಗವೇನು?
೪. ಶಾಲೆಯ ತೋಟದ ವರ್ಣನೆಯನ್ನು ಬರೆಯಿರಿ.

## ೨೨. ಸೆರೆಗುಡುಕ ಸೋಮಪ್ಪ

ಹನುಮಪ್ಪ ಸೋಮಪ್ಪ ಇವರು ಅಣ್ಣತಮ್ಮಂದಿರು. ಹನುಮಪ್ಪ ಅಣ್ಣ. ಸೋಮಪ್ಪ ತಮ್ಮ. ಮನೆತನದಿಂದ ಬಡವರು. ಒಕ್ಕಲುತನ ಮಾಡಿಕೊಂಡು ಜೀವಿಸಬೇಕೆಂದರೆ, ಭೂಮಿ ಇರಲಿಲ್ಲ. ವಿದ್ಯಾಭ್ಯಾಸ ಮಾಡಿದವರೂ ಅಲ್ಲ; ಮನೆತನದಲ್ಲಿ ನಡೆದುಬಂದ ಉದ್ಯೋಗವೂ ಇರಲಿಲ್ಲ. ಇದರಿಂದ ಅವರು ಕೂಲಿ ಮಾಡಿಕೊಂಡು ಹೊಟ್ಟೆ ತುಂಬಿಕೊಳ್ಳಬೇಕಾಯಿತು.

ರಾಮಣ್ಣ ಆ ಊರಲ್ಲಿ ದೊಡ್ಡ ರೈತ. ಹನುಮಪ್ಪನು ರಾಮಣ್ಣನ ಹತ್ತಿರ ಕೂಲಿಯ ಆಳಾಗಿ ದುಡಿಯತೊಡಗಿದನು. ದಿನಾಲು ರಾಮಣ್ಣನ ಹೊಲಕ್ಕೆ ಹೋಗಿ ಎಲ್ಲ ಕೆಲಸಗಳನ್ನು ಮಾಡುತ್ತಿದ್ದನು. ಯಾವ ಕೆಲಸ ಬಂದರೂ ಅವನು ಹಿಂಜರಿಯುತ್ತಿದ್ದಿಲ್ಲ. ರಾಮಣ್ಣನ ಆಳುಗಳಲ್ಲಿ ಕೆಲವರು ಮೈಗಳ್ಳತನ ಮಾಡುತ್ತಿದ್ದರು. ಅಂಥವರನ್ನು ಕಂಡರೆ ಹನುಮಪ್ಪನಿಗೆ ಬಲು ಸಿಟ್ಟು. ಅವರಿಗೆ ಚೆನ್ನಾಗಿ ಬುದ್ಧಿ ಹೇಳುತ್ತಿದ್ದನು. ದೇವರಿಗೆ ಮೆಚ್ಚಿಗೆಯಾಗುವಂತೆ ದುಡಿಯಬೇಕೆಂದು ಅವರೆಲ್ಲರಿಗೂ ತಿಳಿಹೇಳುತ್ತಿದ್ದನು. ಹನುಮಪ್ಪ ಕೂಲಿಯವನಾದರೂ



ಒಳ್ಳೆಯ ಮನುಷ್ಯನೆಂದು ಹೆಸರಾದನು. ಊರ ಹಿರಿಯರಲ್ಲಿ ಗಣ್ಯನೆನಿಸಿಕೊಂಡನು. ತನ್ನ ದುಡಿಮೆಯಿಂದ ಬಂದ ಹಣದಿಂದಲೇ ಸುಖವಾಗಿ ಜೀವಿಸತೊಡಗಿದನು. ಹನುಮಪ್ಪನ ಸುಖಶಾಂತಿಯು ಎಂಥ ಸಿರಿವಂತನಿಗೂ ಇದ್ದಿಲ್ಲ!

ಇತ್ತ ತಮ್ಮನಾದ ಸೋಮಪ್ಪನಿಗೆ ಹಳ್ಳಿಯ ಜೀವನ ಬೇಸರಾಯಿತು. ಹಳ್ಳಿಯಲ್ಲಿ ಕೂಲಿಮಾಡಿಕೊಂಡು ಬಾಳುವದು ಕೀಳೆಂದು ತಿಳಿದನು. ನೆರೆಯ ಪಟ್ಟಣಕ್ಕೆ ಹೋದನು. ಅಲ್ಲಿಯಾದರೂ ಇವನು ಮಾಡುವದೇನು? ಕೂಲಿಯಕೆಲಸವನ್ನೇ! ಹೆಚ್ಚಿನ ಕಸಬನ್ನು ಕಲಿತವನು ಅಲ್ಲ. ಅಂಥ ಬುದ್ಧಿವಂತನೂ ಅಲ್ಲ! ಆದದರಿಂದ ಅವನು ಬಟ್ಟೆಯ ಗಿರಣಿಯಲ್ಲಿ ಕೂಲಿ ಕೆಲಸವನ್ನು ಹಿಡಿದನು. ಹೊಲದಲ್ಲಿ ಕೆಲಸ ಮಾಡುವದಕ್ಕೂ ಗಿರಣಿಯಲ್ಲಿ ಕೆಲಸ ಮಾಡುವದಕ್ಕೂ ಬಹಳ ಅಂತರ! ಹೊಲದಲ್ಲಿ ಕೆಲಸ ಮಾಡುವವನಿಗೆ ಉತ್ತಮ ಹವೆ ಸಿಗುವದು. ಬುದ್ಧಿಯನ್ನು ಉಪಯೋಗಿಸಿ ಕೆಲಸಮಾಡಿ ಆನಂದವನ್ನು ಹೊಂದಬಹುದು. ಗಿರಣಿಯಲ್ಲಿ ಕೆಲಸ ಮಾಡುವದು ಯಂತ್ರದಂತೆಯೇ! ಸ್ವಂತ ಬುದ್ಧಿಯನ್ನು ಬಳಸಲಿಕ್ಕೆ ಅವಕಾಶವೇ ಇಲ್ಲ. ಯಂತ್ರದ ಸಪ್ಪಳಕ್ಕೆ ಕಿವಿಗಳು ಗಡಚಿಕ್ಕುವವು. ಅಲ್ಲಿ ಉತ್ತಮ ಹವೆಯೂ ಇರುವದಿಲ್ಲ. ಆದರೂ ಸೋಮಪ್ಪ ಗಿರಣಿಯ ಕೆಲಸಕ್ಕೆ ನಿಂತನು.

ಮೊದಮೊದಲು ಸೋಮಪ್ಪ ಕೂಲಿಯ ಹಣದಿಂದ ಸುಖವಾಗಿದ್ದನು. ಬರಬರುತ್ತ ಕೂಲಿಕಾರ ಗೆಳೆಯರ ಒಡನಾಟವು ಹೆಚ್ಚಾಯಿತು. ದುಷ್ಟ ದುರುಗಪ್ಪನು ಸೋಮಪ್ಪನ ಗೆಳೆಯನಾದನು. ದುರುಗಪ್ಪನು ಸೆರೆಗುಡುಕ! ಸೋಮಪ್ಪನು ದುರುಗಪ್ಪನ ಸಂಗಡ ದಿನಾಲು ಸೆರೆಯ ಅಂಗಡಿಗೆ ಹೋಗಹತ್ತಿದನು. ಅಲ್ಪಸ್ವಲ್ಪ ಕುಡಿಯಹತ್ತಿದನು. ಮುಂದೆ ಸೋಮಪ್ಪನಿಗೆ ಮನೆತನದ ವೆಚ್ಚಕ್ಕೆ ಹಣವು ಕಡಿಮೆಯಾಗಹತ್ತಿತು. ಹೀಗೆ ಕೆಲವು ದಿವಸಗಳು ಹೋದ ಬಳಿಕ ಅವನಿಗೆ ಕುಡಿಯುವದನ್ನು ಬಿಡಲಿಕ್ಕೆ ಆಗಲಿಲ್ಲ. ಕುಡಿಯುವದು ಬಹಳ ಕೆಟ್ಟ ಚಟ! ಒಮ್ಮೆ ಅದರ ಸೆಳವಿಗೆ ಸಿಕ್ಕರೆ, ಉಳಿವೇ ಇಲ್ಲ! ದುಶ್ಚಟಗಳಿಗೆ ಅದು ತವರುಮನೆ. ಬಳಿಕ ಸೋಮಪ್ಪನು ಸಣ್ಣ ಪುಟ್ಟ ಕಳವು ಮಾಡತೊಡಗಿದನು. ಮನೆಯೊಳಗಿನ ಸಾಮಾನುಗಳನ್ನು ಹೆಂಡಿರು ಮಕ್ಕಳ ಆಭರಣಗಳನ್ನು ಕದ್ದು ಮಾರಹತ್ತಿದನು. ರಾತ್ರಿ ತಡವಾಗಿ ಮನೆಗೆ ಹೋಗಲಾರಂಭಿಸಿದನು. ಹೆಂಡತಿ ಮಕ್ಕಳು ಇವನ ಹಾದಿ ನೋಡಿ, ಊಟಕ್ಕೆ ಏನೂ ಇಲ್ಲದೆ ಉಪವಾಸ ಮಲಗುತ್ತಿದ್ದರು. ಸೆರೆ ಕುಡಿದು ನಿಸೆಯೇರಿ ತೂಗಾಡುತ್ತ ಮನೆಯನ್ನು ಸೇರಿ ಅಪರಾತ್ರಿ ಹೆಂಡತಿ ಮಕ್ಕಳನ್ನು ಬಯ್ಯುತ್ತಿದ್ದನು, ಬಡಿಯುತ್ತಿದ್ದನು ಇದನ್ನು ಕಂಡು ಹೆಂಡತಿಗೆ ಇನ್ನಿಲ್ಲದಷ್ಟು ಗೋಳು!

ಮೊದಲೇ ಮನೆಯಲ್ಲಿ ಸಾಕಷ್ಟು ಅನ್ನವಿಲ್ಲ. ಇದ್ದಷ್ಟು ಅನ್ನವನ್ನು ಪ್ರೀತಿಯಿಂದ ಉಣ್ಣುವಂತಿಲ್ಲ. ಹೆಂಡತಿ ಮಕ್ಕಳಿಗೂ ಅರಹೊಟ್ಟೆ ಊಟ, ಮೈಯಲ್ಲಿ ತ್ರಾಣವಿಲ್ಲ; ಮನಸ್ಸಿಗೆ ಸೊಗಸಿಲ್ಲ! ಸೋಮಪ್ಪನ ಬಾಳುವೆಯನ್ನು ಕಂಡು ನೆರೆಯವರು ಮರುಗುವರು. ಒಂದು ದಿನ ರಾತ್ರಿ ಸೋಮಪ್ಪನು ಸೆರೆಕುಡಿದು ಮನೆಗೆ ಹೋಗುವಾಗ, ನಿಸೆಯೇರಿ ದಾರಿಯಲ್ಲಿಯೇ ಬಿದ್ದುಬಿಟ್ಟನು. ಆಗ ಅವನ ಕಿಸೆಯಲ್ಲಿ ಕೆಲವು ಸಾಮಾನುಗಳು ಸಿಕ್ಕವು. ಅವು ಕಳವಿನವು ಇರಬೇಕೆಂದು ತಿಳಿದು ಪೋಲೀಸರು ಅವನನ್ನು ತಮ್ಮ ಕಚೇರಿಗೆ ಒಯ್ದರು. ಕಳವಿನ ಬಗ್ಗೆ ಅವನ ಮೇಲೆಖಟ್ಲೆ ಹಾಕಲು ಸಿದ್ಧತೆ ನಡೆಸಿದರು.

ಈ ಸುದ್ದಿ ಹನುಮಪ್ಪನಿಗೆ ತಿಳಿಯಿತು. ಕೂಡಲೆ ಅವನು ಪಟ್ಟಣಕ್ಕೆ ಬಂದ. ತಮ್ಮನಾದ ಸೋಮಪ್ಪನನ್ನು ಈ ಸಂಕಟದಿಂದ

ಉಳಿಸಬೇಕೆಂದು ಕಚೇರಿಗೆ ಹೋದನು. ಸೋಮಪ್ಪನ ಕಿಸೆಯಲ್ಲಿ ಸಿಕ್ಕಿದ ಸಾಮಾನುಗಳು ತಮ್ಮ ಮನೆಯವೆಂದೂ ಅವು ಪರರ ಸಾಮಾನು ಗಳು ಅಲ್ಲವೆಂದೂ ಸಿದ್ಧಮಾಡಿಕೊಟ್ಟನು. ಪೋಲೀಸರು ಸೋಮಪ್ಪ ನನ್ನು ಬಿಟ್ಟುಬಿಟ್ಟರು. ಇಬ್ಬರೂ ಅಣ್ಣತಮ್ಮಂದಿರು ಮನೆಗೆ ಬಂದರು. ಮದ್ಯಪಾನದಿಂದ ಹೇಗೆ ಜೀವನ ಹಾಳಾಗುವದೆಂಬದನ್ನು ಹನುಮಪ್ಪನು ವಿವರಿಸಿ ಹೇಳಿದನು. ಸೋಮಪ್ಪನಿಗೂ ಬುದ್ಧಿ ಬಂದಿತು. ಇನ್ನೆಂದೂ ಸೆರೆ ಸಿಂದಿಗಳನ್ನು ಕುಡಿಯುವದಿಲ್ಲವೆಂದು ಪಣತೊಟ್ಟನು. ಅಣ್ಣನ ಸಂಗಡ ತಾನೂ ಹಳ್ಳಿಯಲ್ಲಿಯೇ ಕೆಲಸಮಾಡಿ, ಬಾಳುವೆ ಮಾಡಲು ನಿಶ್ಚಯಿಸಿದನು. ಹೆಂಡತಿ ಮಕ್ಕಳನ್ನು ಕರಕೊಂಡು ಹಳ್ಳಿಗೆ ಹೋದನು. ತಾನು ದುಡಿದು ತಂದ ಹಣದಿಂದ ಸುಖವಾಗಿ ಕಾಲ ಕಳೆದನು.

**ಅಭ್ಯಾಸನಗಳು:-**

೧. ಹನುಮಪ್ಪನು ಒಳ್ಳೆಯವನೆಂದು ಯಾಕೆ ಹೆಸರಾದನು?

೨. ಗಿರಣಿಯಲ್ಲಿ ಕೂಲಿ ಮಾಡುವದಕ್ಕಿಂತ ಹೊಲದಲ್ಲಿ ಕೂಲಿ ಮಾಡುವದು ಯಾಕೆ ಒಳ್ಳೆಯದು?

೩. ಸೆರೆಗುಡುಕ ಸೋಮಪ್ಪನ ಗತಿಯು ಏನಾಯಿತು?

೪. ಸೆರೆ ಕುಡಿಯುವದರಿಂದ ಯಾವ ಯಾವ ದುರ್ಗುಣಗಳು ಸೇರಿಕೊಳ್ಳುವವು?

೫. 'ಹನುಮಪ್ಪನಿಗೆ ಹಳ್ಳಿಯೇ ಒಳ್ಳೆಯದಾಗಿತ್ತು.' ಯಾಕೆ?

೬. ಮೈಮುರಿದು ದುಡಿ, ಮೈಗಳ್ಳತನಮಾಡು ಇವು ಒಂದಕ್ಕೊಂದು ವಿರುದ್ಧ ಅರ್ಥ ಹೇಳುವವು.
ಇದರಂತೆ ಕೆಳಗಿನ ಶಬ್ದಗಳಿಗೆ ವಿರುದ್ಧಾರ್ಥಕ ಶಬ್ದಗಳನ್ನು ಹೇಳಿರಿ:—
ಹೇಡಿಯಾಗು, ಸತ್ಯ ಮಾತಾಡು, ಭಯಗೊಳ್ಳು, ಒಳ್ಳೇ ಕೆಲಸ ಮಾಡು

## ೨೩. ಪಾಕೀಟು

ಮಕ್ಕಳೇ, ನಾಳೆ ನಮ್ಮ ಶಾಲೆಯ ಹುಟ್ಟು ಹಬ್ಬ. ಊರ ಪ್ರಮುಖ ರನ್ನು ನಾವು ಕರೆಯಿಸಬೇಕು. ಸಭೆ ಮಾಡಿ ನಮ್ಮ ಶಾಲೆಯ ಚರಿತ್ರೆ ಯನ್ನು ಎಲ್ಲರಿಗೂ ತಿಳಿಸಬೇಕು. ೪ನೆಯ ವರ್ಗದ ಬಾಲಕರು ಆಮಂತ್ರಣ ಪತ್ರಿಕೆಯನ್ನು ಬರೆದಿರುವರು. ಅವುಗಳನ್ನು ಪಾಕೀಟಿನಲ್ಲಿ ಹಾಕಿ ಕಳುಹಬೇಕಾಗಿದೆ. ನೀವು ಪಾಕೀಟು ಮಾಡಬಲ್ಲಿರಾ? ಅದನ್ನು ಹೇಗೆ ಮಾಡಬೇಕೆಂಬದನ್ನು ಈಗ ನಿಮಗೆ ತೋರಿಸಿ ಕೊಡುವೆ.

ಸುಮಾರು ೧೨ ಇಂಚು ಉದ್ದ ೯ ಇಂಚು ಅಗಲವಾಗಿರುವ ಒಂದು ಕಾಗದದ ತುಂಡನ್ನು ತೆಗೆದುಕೊಳ್ಳಿರಿ. ಕಾಗದವು ದಪ್ಪ ಮತ್ತು ಗಟ್ಟಿಯಾಗಿ ಇರಬೇಕು. ಮೂಲೆಯಲ್ಲಿ ಅ ಬ ಕ ಡ ಎಂದು ಒಂದನೆಯ ಚಿತ್ರದಂತೆ ತೋರಿಸಿದಂತೆ ಹೆಸರುಕೊಡಿರಿ. 'ಅ ಬ' ಗೆರೆಯಮೇಲೆ ಎರಡು ಗುರುತುಗಳನ್ನು ಮಾಡಿಕೊಳ್ಳಬೇಕು. 'ಅ' ಮೂಲೆಯಿಂದ ೨ ಇಂಚು ಅಳೆದು ಒಂದು



ಚಿತ್ರ ೧



ಚಿತ್ರ ೨

ಗುರುತು ಮಾಡಿರಿ. 'ಬ' ಮೂಲೆಯಿಂದ ೫ ಇಂಚು ಅಳೆದು ಒಂದು ಗುರುತು ಮಾಡಿರಿ. ಇದೇ ಪ್ರಕಾರ 'ಕ ಡ' ಗೆರೆಯ ಮೇಲೆ 'ಕ' ಮೂಲೆಯಿಂದ ೨ ಇಂಚು ಅಳೆದು ಒಂದು ಗುರುತು ಮಾಡಿರಿ. 'ಡ' ಮೂಲೆಯಿಂದ ೫ ಇಂಚು ಅಳೆದು ಒಂದು ಗುರುತು ಮಾಡಿರಿ. ೨ನೆಯ ಚಿತ್ರದಲ್ಲಿ ತೋರಿಸಿದಂತೆ ಈ ಗುರುತುಗಳನ್ನು ಕೂಡಿಸಿರಿ.

'ಅ ಕ' ಗೆರೆಯಮೇಲೆ 'ಅ' ಮೂಲೆಯಿಂದ ೧ ಇಂಚು ಅಳೆದು ಗುರುತಿಸಿರಿ. 'ಕ' ಮೂಲೆಯಿಂದ ೧ ಇಂಚು ಅಳೆದು ಗುರುತಿಸಿರಿ. 'ಬ ಡ' ಗೆರೆಯ ಮೇಲೆ 'ಬ' ಮೂಲೆಯಿಂದ ಒಂದು ಇಂಚು ಅಳೆದು ಗುರುತಿಸಿರಿ. 'ಡ' ಮೂಲೆಯಿಂದ ಒಂದು ಇಂಚು ಅಳೆದು ಗುರುತಿಸಿರಿ. ೩ನೆಯ ಚಿತ್ರದಲ್ಲಿ ತೋರಿಸಿದಂತೆ ನೀವು ಮಾಡಿದ ಗುರುತುಗಳನ್ನು ಕೂಡಿಸಿರಿ; ಮನೆಗಳಿಗೆ ಅಂಕೆ ಹಾಕಿರಿ.



ಚಿತ್ರ ೩

೧, ೩, ೬ ಮತ್ತು ೪ ಈ ಮನೆಗಳನ್ನು ಕತ್ತರಿಯಿಂದ ಕತ್ತರಿಸಿರಿ. ೪ನೆಯ ಚಿತ್ರದಲ್ಲಿ ತೋರಿಸಿದಂತೆ ಈಗ ನಿಮ್ಮ ಕಾಗದವು ಆಗುವದು.



ಚಿತ್ರ ೪

೨ ಮತ್ತು ೫ ಮನೆಗಳನ್ನು ೮ರ ಮೇಲೆ ಮಡಿಚಿರಿ. ೮ರ ಮೇಲೆ ೭ನೆಯ ಮನೆಯನ್ನು ಮಡಿಚಿರಿ. ಮೇಲಿನ ಗೆರೆ ನೋಡಿ ಸರಿಯಾಗಿ


ಚಿತ್ರ ೫

ಹೊಂದಿಸಿರಿ. ತುದಿಗೆ ಅಂಟು ಹಚ್ಚಿರಿ. ಈಗ ೯ನೆಯ ಮನೆಯನ್ನು ಕೆಳಗೆ ಮಡಿಚಿರಿ. ಚಿತ್ರ ೫ರಲ್ಲಿ ತೋರಿಸಿದಂತೆ ಮೂಲೆಗಳನ್ನು ಕತ್ತರಿಸಿರಿ. ಈಗ ನಿಮ್ಮ ಪಾಕೀಟು ಸಿದ್ಧವಾಯಿತು.

೪ನೆಯ ವರ್ಗದ ಬಾಲಕರು ಆಮಂತ್ರಣ ಪತ್ರಿಕೆಗಳನ್ನು ಬರೆದಿದ್ದಾರೆ; ಅವುಗಳನ್ನು ತರಿಸಿ, ಈ ಪಾಕೀಟುಗಳಲ್ಲಿ ಹಾಕೋಣ. ವಿಳಾಸ ಬರೆದು ನಾಳೆ ಬೆಳಗ್ಗೆ ಇವುಗಳನ್ನು ಅವರವರ ಮನೆಗೆ ಮುಟ್ಟಿಸೋಣ.

**ಅಭ್ಯಸನಗಳು:—**

೧. ಇನ್ನೊಂದು ಕಾಗದವನ್ನು ತೆಗೆದುಕೊಂಡು ಇಂಥ ಪಾಕೀಟು ಮಾಡಿ ತೋರಿಸಿರಿ.

೨. ನೀವು ಮಾಡಿದ ಪಾಕೀಟುಗಳನ್ನು ಯಾವ ಯಾವ ಪ್ರಸಂಗಗಳಲ್ಲಿ ಉಪಯೋಗಿಸುವಿರಿ?

೩. ಇದಕ್ಕೂ ಸಣ್ಣ ಇಲ್ಲವೆ ದೊಡ್ಡ ಪಾಕೀಟುಗಳು ಬೇಕಾಗಿದ್ದರೆ, ನೀವು ಏನು ಮಾಡುವಿರಿ?

## ೨೪. ಜೇಡಹುಳ

ಜೇಡಹುಳದ ಬಲೆಯನ್ನು ನೀವು ನೋಡಿರುವಿರಾ? ಒಮ್ಮೊಮ್ಮೆ ನಿಮ್ಮ ಮುಖಕ್ಕೆ ಅದು ತಾಕಿರಬಹುದು. ಎಳೆಗಳು ಕಾಣುವದೇ ಇಲ್ಲ. ಅಷ್ಟು ಸೂಕ್ಷ್ಮವಾದ ಎಳೆಗಳು ಆ ಬಲೆಯಲ್ಲಿ ಇರುತ್ತವೆ. ಜೇಡಹುಳವು ತನ್ನ ಬಲೆಯನ್ನು ಹೇಗೆ ಹೆಣೆಯುವದೆಂಬದು ನಿಮಗೆ ಗೊತ್ತಿದೆಯೇ?

ಮುಂದಿನ ಚಿತ್ರದಲ್ಲಿ ಒಂದು ಬಲೆಯಿದೆ, ನೋಡಿರಿ. ಸುಮಾರು ಒಂದು ತಾಸಿನಲ್ಲಿ ಜೇಡಹುಳವು ತನ್ನ ಬಲೆಯನ್ನು ಹೆಣೆಯುವದು. ಮೊದಲು ಬಲೆಗೆ ಬೇಕಾದ ಚೌಕಟ್ಟನ್ನು ಸಿದ್ಧಗೊಳಿಸುವದು. ಮೇಲೆ ಒಂದು ಎಳೆಯನ್ನು ಅಂಟಿಸಿ, ಸರ್ರನೆ ಕೆಳಗಿಳಿಯುವದು. ಅದರ ಹಿಂದೆಯೇ ಹೊಸ ಎಳೆ ಹೊರಡುವದು. ಮೊದಲಿನ ಎಳೆಗೆ ಹೊಸ ಎಳೆಯನ್ನು ಅಂಟಿಸುವದು. ಜೇಡವು ಹೊಸ ಎಳೆ ಹಿಡಿದು ಮತ್ತೆ ಮೇಲೆ ಹೋಗುವದು. ಆಗ ಅಂಟು ರಸವನ್ನು ಬಿಟ್ಟು ಆ ಎಳೆಯನ್ನು ಗಟ್ಟಿ ಮಾಡುವದು. ಈ ಎಳೆಗಳ ನಡುವೆ ಅಂಟು ಪದಾರ್ಥದ ಒಂದು ಸಿಂಬಿಯನ್ನೇ ಉಂಟುಮಾಡುವದು. ಇದೇ ಬಲೆಯ ಕೇಂದ್ರಸ್ಥಾನವು.



ಬೇರೆ ಬೇರೆ ದಿಕ್ಕುಗಳಿಗೆ ಹೋಗಿ, ಚಕ್ಕಡಿಯ ಗಾಲಿಯ ಹಲ್ಲುಗಳಂತೆ ಮಧ್ಯದಿಂದ ಹಲವು ಎಳೆಗಳನ್ನು ಜೇಡವು ಹೆಣೆಯುವದು. ಬಳಿಕ ಸುತ್ತಲೂ ತಿರುಗಿ ನೂರಾರು ಎಳೆಗಳನ್ನು ಅಂಟಿಸಿ ಬಲೆಯನ್ನು ಪೂರ್ಣ ಮಾಡುವದು.

ಜೇಡಹುಳವು ತನ್ನ ಬಲೆಯನ್ನು ಏತಕ್ಕಾಗಿ ಉಪಯೋಗಿಸುವದು ನಿಮಗೆ ಗೊತ್ತಿದೆಯೇ? ನೊಣ, ಜಿಟ್ಟೆ ಮೊದಲಾದ ಚಿಕ್ಕ ಹುಳಗಳನ್ನು ಹಿಡಿಯಲು ಉಪಯೋಗಿಸುವದು. ಅದಕ್ಕೆ ಮೋಸದ ಬಲೆ ಎಂದು ಹೇಳಬಹುದು. ಕೆಲವು ಜಾತಿಯ ಜೇಡಹುಳಗಳು ನೊಣಗಳನ್ನು ಹಿಡಿಯಲು ಹೊಂಚು ಹಾಕಿ ತಮ್ಮ ಬಲೆಗಳಲ್ಲಿಯೇ ಕುಳಿತುಕೊಳ್ಳುವವು. ತೋಟಗಳಲ್ಲಿರುವ ಒಂದು ಜಾತಿಯ ಜೇಡಹುಳವು ಬಲೆಯಲ್ಲಿ ಇರುವದಿಲ್ಲ. ಬಲೆ ಕಟ್ಟಿದ ಗಿಡಗಳ ಎಲೆಗಳಲ್ಲಿ ಅವಿತುಕೊಳ್ಳಲು ಸ್ಥಳ ಮಾಡಿಕೊಂಡು ಅಲ್ಲಿ ಇರುವದು.

ಜೇಡಹುಳದ ಜಾಳಿಗೆಯಲ್ಲಿ ಒಂದು ಹುಳವು ಸಿಕ್ಕಿತೆಂದು ತಿಳಿಯಿರಿ. ಅಡಗಿಕೊಂಡ ಸ್ಥಳದಿಂದ ಆ ಹುಳವನ್ನು ಜೇಡಹುಳವು ಹಿಡಿಯಬಹುದೇ? ಹೌದು! ಅದು ಮಿಂಚಿನ ವೇಗದಿಂದ ಅಲ್ಲಿಗೆ ಬರುವದು! ಇದನ್ನು ಕಂಡು ಅಚ್ಚರಿಗೊಂಡ ಒಬ್ಬ ಶಾಸ್ತ್ರಜ್ಞನು ಒಂದು ಪ್ರಯೋಗ

ವನ್ನು ಮಾಡಿದ್ದಾನೆ. ಜೇಡಹುಳದ ಜಾಳಿಗೆಯಲ್ಲಿ ಒಂದು ಸತ್ತ ಜಿಟ್ಟೆಯನ್ನು ಮೆಲ್ಲನೆ ಇಟ್ಟನು. ಜೇಡಹುಳವು ತನ್ನ ಜಾಳಿಗೆಯಲ್ಲಿದ್ದರೂ, ಅದು ಜಿಟ್ಟೆಯನ್ನು ನೋಡಿರಲಿಲ್ಲ. ತುಸು ಅಂತರದಲ್ಲಿಯೇ ಆ ಜಿಟ್ಟೆ ಇದ್ದರೂ ಜೇಡಹುಳವು ಸುಮ್ಮನೆ ಓಡಾಡುತ್ತಿತ್ತು. ಇದು ಅವನಿಗೆ ಸೋಜಿಗವೆನಿಸಿತು. ಒಂದು ಉದ್ದವಾದ ಹುಲ್ಲು ಕಡ್ಡಿಯಿಂದ ಆ ಜಿಟ್ಟೆಯನ್ನು ಮುಟ್ಟಿ, ಅದು ನಡುಗುತ್ತಿರುವಂತೆ ಮಾಡಿದನು. ಅಷ್ಟೇ ಸಾಕು! ಜೇಡಹುಳವು ತನ್ನ ಜಾಳಿಗೆಗೆ ಕೂಡಲೇ ಓಡಿಬಂದಿತು. ಆ ಜಿಟ್ಟೆಯನ್ನು ತನ್ನ ಎಳೆಗಳಿಂದ ಬಿಗಿಯಿತು. ಜಾಳಿಗೆ ಸ್ವಲ್ಪ ಅಗಲಾಡಿತೆಂದರೆ, ತೀರಿತು! ಜೇಡಹುಳವು ಜಾಳಿಗೆಗೆ ತೆರಳುವದು. ಹಲವು ಜೇಡಹುಳಗಳ ಮೇಲೆ ಆ ಮನುಷ್ಯನು ಈ ಪ್ರಯೋಗವನ್ನು ಮಾಡಿದನು.

ಜೇಡಹುಳವು ತನ್ನ ಅಡಗುವ ಸ್ಥಳದಲ್ಲಿದ್ದರೆ, ಜಾಳಿಗೆ ಅಗಲಾಡಿದ್ದು ಅದಕ್ಕೆ ಹೇಗೆ ತಿಳಿಯುವದು? ಅಡಗಿಕೊಂಡು ಇರುವ ಜೇಡಹುಳದ ಜಾಳಿಗೆಯನ್ನು ಹಗಲು ನೀವು ಚೆನ್ನಾಗಿ ನೋಡಿರಿ. ಜಾಳಿಗೆಯ ಮಧ್ಯದಲ್ಲಿ ಒಂದು ಎಳೆ ಕಾಣಿಸುವದು. ಅದು ಜೇಡಹುಳವು ಅಡಗಿರುವ ಸ್ಥಳದ ವರೆಗೆ ಹೋಗಿರುವದು. ಈ ಎಳೆಯು ಸುಮಾರು ಎರಡು ಘೂಟು ಉದ್ದ ಇರುವದು; ಆದರೆ ಎತ್ತರವಾದ ಗಿಡದ ಮೇಲೆ ಇರುವ ಒಂದು ಜಾತಿಯ ಜೇಡಹುಳದ ಇಂಥ ಎಳೆಯು ಎಂಟು ಅಥವಾ ಒಂಬತ್ತು ಘೂಟು ಉದ್ದ ಇರುವದು.

ಈ ಎಳೆಯು ಅದಕ್ಕೆ ಒಂದು ಸೇತುವೆ ಇದ್ದಂತೆ. ಅದರಗುಂಟ ತನ್ನ ಜಾಳಿಗೆಗೆ ಇಳಿಯುವದು ಇಲ್ಲವೆ ಮತ್ತೆ ಮೇಲೆ ಹೋಗುವದು. ಈ ಎಳೆಯ ಉಪಯೋಗವು ಇಷ್ಟೇ ಅಲ್ಲ! ಅದು ತಾರಿನ ತಂತಿಯಿದ್ದಂತೆ. ಹುಳವು ಬಲೆಯಲ್ಲಿ ಬಿದ್ದ ಸುದ್ದಿಯನ್ನು ಮುಟ್ಟಿಸುವದು.

ಜಾಳಿಗೆಯನ್ನು ಸರಿಯಾಗಿ ನಿರೀಕ್ಷಿಸಿರಿ. ಈ ಎಳೆಯನ್ನು ಜಾಳಿಗೆಯ ಮಧ್ಯದಲ್ಲಿ ಹೆಣೆಯಲಾಗಿದೆ. ಅಲ್ಲಿಯೇ ಜಾಳಿಗೆಯ ಎಲ್ಲ ಎಳೆಗಳು ಕೂಡುವವು. ಜಾಳಿಗೆಯ ಯಾವದೊಂದು ಭಾಗವು ಚಲಿಸಿದರೆ, ಈ ಮಧ್ಯ ಎಳೆಯು ಚಲಿಸುವದು. ಜಾಳಿಗೆಯ ಮೇಲೆ

ಏನಾದರೂ ಓಡಾಡಿದರೆ, ಜಾಳಿಗೆಯು ಅಗಳಾಡುವದು. ತೀವ್ರವೆ ಮಧ್ಯದ ಎಳೆಯ ಸಹಾಯದಿಂದ ಜೇಡಹುಳಕ್ಕೆ ಈ ಸುದ್ದಿ ತಿಳಿಯುವದು.

ಇಂಥ ವಿಚಿತ್ರ ಜಾತಿಯ ಜೇಡಹುಳವು ಚಿತ್ರದಲ್ಲಿ ಅದೆ. ಅದರ ಜಾಳಿಗೆಯು ಸುಮಾರು ೩ ಫೂಟು ಅಗಲವಿತ್ತು. ಬಿಸಿಲು ಬಹಳ ವಿದ್ದದರಿಂದ ಆ ಜೇಡಹುಳವು ಗಿಡಗಳ ಎಲೆಗಳ ಮೇಲೆ ಇದ್ದ ಅಡಗುವ ಸ್ಥಳಕ್ಕೆ ಹೋಗಿದೆ. ಜಾಳಿಗೆಯ ಕಡೆಗೆ ಬೆನ್ನು ಮಾಡಿಕೊಂಡು ಎಲೆಗಳ ಮೇಲೆ ಕುಳಿತಿದೆ. ಅದಕ್ಕೆ ಜಾಳಿಗೆ ಕಾಣಿಸುವದಿಲ್ಲ. ತನ್ನ ಹಿಂದಿನ ಬಲಗಾಲನ್ನು ಹೊರಗೆ ಚಾಚಿ, ಮಧ್ಯದ ಎಳೆಯನ್ನು ಹಿಡಿದಿದೆ. ಆ ಮಧ್ಯದ ಎಳೆಯೇ ಸುದ್ದಿ ತರುವ ತಂತಿ.

ಜಾಳಿಗೆಯಲ್ಲಿ ಒಂದು ನೊಣವು ಸಿಕ್ಕಿಕೊಂಡರೆ ಕೂಡಲೆ ಓಡಿ ಬಂದು ತನ್ನ ವಿಷದ ದವಡೆಗಳಿಂದ ಆ ನೊಣವನ್ನು ಕಚ್ಚಿ ಹಿಡಿಯುವದು. ನೊಣವು ಒದ್ದಾಡದಂತೆ ಹೊಸ ದಾರಗಳಿಂದ ಬಿಗಿಯುವದು. ಹಸಿವಾಗಿದ್ದರೆ ಕೂಡಲೆ ಅದನ್ನು ತಿಂದು ಮುಗಿಸುವದು. ಇಲ್ಲವಾದರೆ ಒಂದೆಡೆಯಲ್ಲಿ ಬಚ್ಚಿಟ್ಟುಕೊಂಡು ಬೇಕಾದಾಗ ಅದರ ನೆತ್ತರವನ್ನು ಹೀರುತ್ತದೆ. ಹೀಗೆ ಹೀರಿ ಬಿಟ್ಟ ಪೊಳ್ಳುನೊಣಗಳು ಜೋತಾಡುತ್ತಿರುವ ದನ್ನು ಅಲ್ಲಿ ನೀವು ಕಾಣಬಹುದು.

ಚಿಕ್ಕ ಜೇಡಹುಳಗಳು ಈ ಮಧ್ಯದ ಎಳೆಯನ್ನು ಹೆಚ್ಚಾಗಿ ಉಪಯೋಗಿಸುವದಿಲ್ಲ ಆದರೆ ಮುದಿ ಜೇಡಹುಳಗಳು ಎಲೆಗಳ ಮೇಲೆ ಅಡಗಿಕೊಂಡು ಮಲಗುವವು. ಅವುಗಳಿಗೆ ಬೇಟೆಯ ಸುದ್ದಿ ತರುವ ಈ ಎಳೆಯ ಉಪಯೋಗವು ಬಹಳ.

ಜೇಡಹುಳದಷ್ಟು ಉಗ್ರವಾದ ಮತ್ತು ಹೊಟ್ಟೆಬಾಕ ಹುಳವು ಬೇರೊಂದಿಲ್ಲ. ಅದು ಬಹಳ ಧೈರ್ಯಶಾಲಿ. ತನಗಿಂತಲೂ ದೊಡ್ಡ ಹುಳಗಳನ್ನು ಹಿಡಿಯಲು ಸಹ ಹೊಂಚುಹಾಕುವದು. ಇದರಿಂದ ಜೇಡವನ್ನು 'ಹುಳಗಳ ಹುಲಿ' ಎಂದು ಕರೆಯಬಹುದು. ಆಹಾರ ಸಿಕ್ಕದಿದ್ದರೆ ದೊಡ್ಡ ಜೇಡವು ಚಿಕ್ಕ ಜೇಡಗಳನ್ನು ಹಿಡಿದು ನೆತ್ತರ

ಹೀರುವದು. ಹೆಣ್ಣು ಜೇಡವು ಆಕಾರದಲ್ಲಿ ಗಂಡು ಜೇಡಕ್ಕಿಂತ ದೊಡ್ಡದು ಅದು ಹೆಚ್ಚು ಅಂದವಾದ ಬಲೆಯನ್ನು ಹೆಣೆಯಬಲ್ಲದು. ಒಮ್ಮೊಮ್ಮೆ ಹೆಣ್ಣು ಜೇಡವು ಗಂಡು ಜೇಡವನ್ನು ಹಿಡಿದು ಕೊಲ್ಲುವದು. ಜೇಡಹುಳಗಳು ಎಂಥ ವಿಚಿತ್ರ ಪ್ರಾಣಿಗಳು!

**ಅಭ್ಯಸನಗಳ :—**

೧. ಜೇಡಹುಳಗಳು ಜಾಳಿಗೆಯನ್ನು ಏಕೆ ಕಟ್ಟುವವು?

೨. ಸತ್ತ ಜಿಟ್ಟಿಯನ್ನು ಮೆಲ್ಲನೆ ಜಾಳಿಗೆಯಲ್ಲಿಟ್ಟಾಗ ಜೇಡಹುಳವು ಸುಮ್ಮನೆ ಯಾಕೆ ಇತ್ತು?

೩. ಜಿಟ್ಟಿಯನ್ನು ಹುಲ್ಲಿನಿಂದ ಅಗಳಾಡಿಸಿದಾಗ ಜೇಡಹುಳವು ಏನು ಮಾಡಿತು?

೪. ಬೇಟೆ ಬಿದ್ದದ್ದನ್ನು ಜೇಡಹುಳವು ಹೇಗೆ ತಿಳಿದುಕೊಳ್ಳುವದು?

## ೨೫. ಆಹಾರ

ಆಹಾರವು ಎಲ್ಲರಿಗೂ ಬೇಕು. ನಾವು ತಕ್ಕೊಳ್ಳುವ ಆಹಾರದಿಂದ ನಮ್ಮ ಸ್ನಾಯುಗಳು ಬೆಳೆಯುವವು; ನಮ್ಮ ಎಲುವುಗಳು ಗಟ್ಟಿಯಾಗುವವು. ಅದೇಕೆ? ನಾವು ಬದುಕುವದು ಆಹಾರದಿಂದಲೇ.

ಗಟ್ಟಿಗರಾಗಿ ಬೆಳೆಯಬೇಕೆಂದು ಬಹು ಜನರು ಬಯಸುವರು. ಆದರೆ ಕೆಲವರು ದುರ್ಬಲ ದೇಹದವರಾಗುವರು. ಬೇರೆ ಕೆಲವರು ರೋಗಿಗಳಾಗಿ ಬಾಳುವರು. ಅಶಕ್ತತೆಯುಂಟಾಗುವದೂ, ರೋಗಗಳು ಅಂಟಿಕೊಳ್ಳುವದೂ ಯಾತರಿಂದ ಎಂಬದನ್ನು ಬಲ್ಲಿರಾ? ಹೆಚ್ಚಾಗಿ ನಾವು ತಕ್ಕೊಳ್ಳುವ ಆಹಾರದ ಮೇಲೆಯೇ ಅವು ಅವಲಂಬಿಸಿವೆ. ಯೋಗ್ಯ ಆಹಾರವನ್ನು ತಕ್ಕೊಂಡರೆ, ನಮ್ಮ ಆರೋಗ್ಯವು ಹೆಚ್ಚುವದು. ಅಯೋಗ್ಯ ಆಹಾರವನ್ನು ಸೇವಿಸಿದರೆ, ನಮ್ಮ ದೇಹವು ರೋಗಗಳ ತವರುಮನೆಯಾಗುವದು. ಯೋಗ್ಯ ಆಹಾರವೆಂದರೆ ಯಾವದು?

ದಿನಾಲು ರೊಟ್ಟಿ, ಕಾಯಿಪಲ್ಯೆ, ಹಾಲು, ಅನ್ನ ಮೊದಲಾದ ಆಹಾರ ಪದಾರ್ಥಗಳನ್ನು ಊಟ ಮಾಡುತ್ತೇವೆ. ಅವೆಲ್ಲವೂ ಬಿಸಿ ಇರಬೇಕು. ಹಸಿಬಿಸಿ ರೊಟ್ಟಿ, ಕೊಳೆತ ಕಾಯಿಪಲ್ಯೆಗಳನ್ನು ತಿನ್ನಬಾರದು. ಚೆನ್ನಾಗಿ ಬೇಯಿಸಿದ ಆಹಾರವು ಒಳ್ಳೆಯದು. ಒಳ್ಳೆಯ ಪದಾರ್ಥಗಳಿಂದ ಸಿದ್ಧವಾದ ಆಹಾರವು ಹಿತಕರವು. ಹಣ್ಣು, ಕಾಯಿ ಪಲ್ಯೆಗಳನ್ನು ಹೆಚ್ಚಿ ಹಾಗೆಯೇ ನಿಮ್ಮ ತಾಯಿಯು ಇಡಬಹುದು. ಆಗ ಅವುಗಳ ಮೇಲೆ ನೊಣಗಳು ಕೂಡ್ರುವವು; ನೊರಜುಗಳು ನಿಲ್ಲುವವು; ಅವುಗಳ ತೀರ ಸೂಕ್ಷ್ಮ ರೋಗ ಜಂತುಗಳು ಅವುಗಳಲ್ಲಿ ಸೇರಿಕೊಳ್ಳುವವು. ಅಂಥವುಗಳನ್ನು ನೀವು ತಿನ್ನುವಿರಿ. ಅದು ಅಪಾಯಕರವು. ಅಡಿಗೆ ಸಿದ್ಧವಾದ ಬಳಿಕ ಅದನ್ನು ಮುಚ್ಚದೆ ಹಾಗೆಯೇ ಕೆಲವರ ಮನೆಯಲ್ಲಿ ಇಡಬಹುದು. ಇದೊಂದು ಕೆಟ್ಟ ಚಟ. ಆಹಾರವು ತಣ್ಣಗಾಗುವದು; ಅಲ್ಲದೆ ಅದರಲ್ಲಿ ರೋಗ ಜಂತುಗಳು ಸೇರಿಕೊಳ್ಳುವವು.

ರಾತ್ರಿ ಮಾಡಿದ ಅಡಿಗೆ ಉಳಿದಿದ್ದರೆ, ಅದನ್ನು ಮರುದಿನ ಬೆಳಿಗ್ಗೆ ಕೆಲವರು ತಿನ್ನುವರು. ಅದಂತೂ ತೀರ ಕೆಟ್ಟದು. ತಂಗೂಳನ್ನು ತಿನ್ನಬಾರದು. ಚೆನ್ನಾಗಿ ಬೇಯಿಸಿದ ಆಹಾರವನ್ನು ಬಿಸಿಯಿರುವಾಗಲೇ ಉಣ್ಣಬೇಕು. ಆಹಾರವನ್ನು ಆರಿಸುವದರಿಂದಲೂ, ಬಹಳ ಹೊತ್ತು ಹಾಗೆಯೇ ಇಡುವದರಿಂದಲೂ ಅದು ಕೆಡುವದು. ಯಾವ ಆಹಾರದಿಂದ ನಮ್ಮ ಆರೋಗ್ಯವು ಕೆಡುವದಿಲ್ಲವೋ ಅದು ಯೋಗ್ಯ ಆಹಾರವು.

ನೀವು ತರತರದ ತಿನಿಸುಗಳನ್ನು ಮಿಠಾಯಿಯ ಅಂಗಡಿಗಳಲ್ಲಿ ಕೊಂಡು ಉಬ್ಬಿನಿಂದ ತಿನ್ನುವಿರಿ. ಕೆಟ್ಟ ಎಣ್ಣೆಯಲ್ಲಿ ಕರಿದ ಕಾರದಾಣೆ, ಕರಿದಂಟು, ಉಂಡಿಗಳನ್ನು ಮಿಠಾಯಿಗಾರನು ತಟ್ಟೆಯಲ್ಲಿ ಇಡುವನು; ಅವನ್ನು ಮುಚ್ಚಿ ಇಡುವದಿಲ್ಲ. ನೊಣ ನೊರಜುಗಳು ಆ ತಿನಿಸುಗಳ ಮೇಲೆ ಕುಳಿತುಕೊಳ್ಳುವವು. ಅವುಗಳ ಮೈಯಲ್ಲಿಯೂ ಹೊಟ್ಟೆ ಯಲ್ಲಿಯೂ ಸೂಕ್ಷ್ಮ ರೋಗ ಜಂತುಗಳು ಇರುವವು. ನೊಣಗಳು ಆ ಮಿಠಾಯಿಗಳ ಮೇಲೆ ಒಂದು ತರದ ದ್ರವ್ಯವನ್ನು ಬಿಡುವವು. ಅದರಲ್ಲಿ

ಲಕ್ಷಾವಧಿ ರೋಗ ಜಂತುಗಳು ಇರುವವು. ಅವು ತಿನಿಸುಗಳಲ್ಲಿ ಬೆರೆತು ಕೊಳ್ಳುವವು. ಅಂತಹ ತಿನಿಸುಗಳನ್ನು ತಿಂದರೆ, ಬೇನೆ ಬೇಸರಿಕೆಗಳು ಬರುವವು. ಕಸುಗಾಯಿಗಳನ್ನೂ, ಕೊಳೆತ ಹಣ್ಣುಗಳನ್ನೂ ತಿನ್ನಬಾರದು. ಅವು ಪಚನಕ್ರಿಯೆಯನ್ನು ಕೆಡಿಸುವವು.

ಹಬ್ಬ ಹುಣ್ಣಿವೆಗಳಲ್ಲಿ ಹೋಳಿಗೆ, ಕರಿಗಡಬು ಮೊದಲಾದ ಸವಿ ಸವಿ ಪದಾರ್ಥಗಳನ್ನು ಮನದಣಿಯೆ ತಿನ್ನುವರು. ನಾಲಿಗೆಗೆ ರುಚಿ ಎನಿಸಿ ಊಟವು ಹೆಚ್ಚಾಗಿ ಹೋಗುವದು; ಆದರೆ ಅದರಿಂದ ಹೊಟ್ಟೆ ಕೆಡುವದು. ಜಡ ಪದಾರ್ಥಗಳನ್ನು ಬಹಳವಾಗಿ ತಿಂದರೆ ಅಜೀರ್ಣ ವಾಗುವದು; ಅದರಿಂದ ರೋಗಗಳು ಉಂಟಾಗುವವು. ಸಿಹಿ ಪದಾರ್ಥಗಳನ್ನು ಸಹ ಮಿತಿಯಿಂದ ತಿನ್ನಬೇಕು. ಸಿಕ್ಕ ಸಿಕ್ಕ ಪದಾರ್ಥಗಳನ್ನು ತಿನ್ನುವದೂ, ಕಂಡಕಂಡಾಗ ತಿನ್ನುವದೂ ಒಳಿತಲ್ಲ. ಮಕ್ಕಳೇ, ಹೀಗೆ ಎಚ್ಚರಿಕೆಯಿಂದ ನೀವು ಆಹಾರವನ್ನು ತಕ್ಕೊಳ್ಳ ಬೇಕು; ಅಂದರೆ ನಿಮ್ಮ ದೇಹವು ಬೆಳೆಯುವದು; ಆರೋಗ್ಯವು ಉಂಟಾಗುವದು; ಆಯುಷ್ಯವು ಬೆಳೆಯುವದು; ಸುಖವು ಸಿಗುವದು.

**ಅಭ್ಯಸನಗಳು:-**

೧. ಆಹಾರವು ನಮಗೆ ಏಕೆ ಬೇಕು?
೨. ಅಶಕ್ತತೆ ಹೇಗೆ ಉಂಟಾಗುತ್ತದೆ?
೩. ಯಾವ ತರದ ಆಹಾರಗಳಿಂದ ರೋಗಗಳು ಉಂಟಾಗುತ್ತವೆ?
೪. ನಾವು ಸುಖವಾಗಿ ಬಾಳಬೇಕಾದರೆ ಎಂಥ ಆಹಾರವು ಬೇಕು?
೫. ಕೆಳಗಿನ ಮಾತುಗಳು ತಪ್ಪು ಅಥವಾ ಸರಿ ಎಂಬದನ್ನು ಹೇಳಿರಿ:
ಅ) ಆಹಾರವಿಲ್ಲದೆ ನಾವು ಬದುಕಲಾರೆವು.
ಆ) ಸಿಕ್ಕ ಸಿಕ್ಕ ಪದಾರ್ಥಗಳನ್ನು ತಿಂದರೆ ಏನೂ ಆಗುವದಿಲ್ಲ.
ಇ) ಹೋಳಿಗೆ, ಕರಿಗಡಬು ಮೊದಲಾದ ಸಿಹಿ ಪದಾರ್ಥಗಳನ್ನು ಬಹಳವಾಗಿ ತಿನ್ನಬೇಕು.
ಈ) ಪಕ್ವವಾಗದ ಮತ್ತು ಕೊಳೆತ ಹಣ್ಣುಗಳನ್ನು ತಿನ್ನುವದು ಒಳಿತು.
ನಮ್ಮ ಆಹಾರದ ಬಗ್ಗೆ ಚಿಕ್ಕ ನಿಬಂಧ ಬರೆಯಿರಿ.

# ೨೬. ಧ್ರುವ ಚರಿತ್ರೆ



ಭಾಮಿನೀ ಷಟ್ಪದಿ

ಒಂದು ದಿನ ಧ್ರುವ ತಾಯ ಬಳಿಯಲಿ ।
ಬಂದು ತನ್ನಯ ತಂದೆ ಯಾರೌ ।
ಎಂದೆನಲು ಕಣ್ಣೀರ ಸುರಿಸಿ ಸುನೀತಿ ದುಃಖದಲಿ ॥
ಚೆಂದದಿಂದೀ ನಾಡನಾಳುವ ।
ನೆಂದು ಹೊಗಳಿಸಿಕೊಳ್ಳುವವನೇ ।
ಕಂದ ನಿನ್ನನು ಪಡೆದವನು ತಿಳಿಯೆಂದು ಪೇಳಿದಳು ॥ ೧ ॥

ಪಡೆದ ತಾಯನು ಕೇಳಿ ಧ್ರುವ ತಾ - ।
ನೊಡನೆ ಕಾಣಲು ಬಂದು ತಂದೆಯ ।
ತೊಡೆಯನೇರಲು ಕಂಡು ಗಲ್ಲವ ಪಿಡಿದು ಮೈದಡವಿ ॥
ಕಡು ಮಮತೆಯಲಿ ಮಾತನಾಡುವ ।
ಪೊಡವಿಯೊಡೆಯನ ನೋಡಿ ಸುರುಚಿಯು ।
ತಡೆಯದೆಡಗಾಲಿಂದ ಕೆಡಹಿದಳೊದೆದು ಮಲಮಗನ ॥ ೨ ॥

ನೊಂದು ಧ್ರುವ ತಾ ತಾಯ ಬಳಿಯಲಿ |
ಬಂದು ಹೇಳಿದನೆಲ್ಲ ಕಥೆಯನು |
ಕಂದ ನೀ ಪಡೆದಿಲ್ಲ ದೇವರೊಳೇನು ಮಾಡುವದು ||
ಎಂದೆನಲು ಹೇಳಮ್ಮ ದೇವನ - |
ನಿಂದು ಕಾಣುವೆನೆಲ್ಲಿರುವನವ - |
ನಿಂದು ಕೇಳಲು ಜಗವತುಂಬಿಹನೆಂದು ಹೇಳಿದಳು || ೩ ||

ಗಡನೆ ಜನನಿಗೆ ನಮಿಸಿ ಧ್ರುವ ತಾ |
ನಡೆದನಡವಿಗೆ ಕೇಳುತಿದನಾ |
ಪೊಡವಿಪನು ಬೆಂಬತ್ತಿ ಪೋಗದಿರಯ್ಯ ಬೇಡಿದುದ ||
ಕೊಡುವೆನೆನೆ ಮಗು ತಾನು ಮೆಚ್ಚದೆ |
ನಡೆಯೆ ನಾರದನೊಂದು ಮಂತ್ರವ - |
ನೊಡನೆ ಪೇಳಿದನವಗೆ ತಾನತಿಕರುಣದೊಳು ಹರಸಿ || ೪ ||

ಒಂದೆ ಮನದೊಳು ಮಂತ್ರ ಜಪಿಸಲು |
ಬಂದು ದೇವನು ತಪಕೆ ಮೆಚ್ಚಿದೆ |
ಕಂದ ಬೇಡೈ ವರವನೆನಲವ ನಿಮ್ಮ ಸ್ಮರಣೆಯನು ||
ಎಂದಿಗೂ ಮಲತಾಯಿ ದೂಡದ - |
ದೊಂದು ರಾಜ್ಯವನಿತ್ತು ರಕ್ಷಿಪು - |
ದೆಂದೆರಗೆ ಹರಸಿದನು ವರಗಳ ಕೊಟ್ಟು ಮುದದಿಂದ || ೫ ||

**ಅಭ್ಯಸನಗಳು:—**

೧. ಧ್ರುವನು ತಂದೆಯ ತೊಡೆಯ ಮೇಲೆ ಕುಳಿತಾಗ ಸುರುಚಿಯು ಅವನನ್ನು ಯಾಕೆ ಒದೆದಳು?
೨. ಒಳಿಕ ಧ್ರುವನು ಹಡೆದ ತಾಯಿಗೆ ಏನೆಂದು ಕೇಳಿದನು?
೩. ಧ್ರುವನು ಅಡವಿಗೆ ಯಾಕೆ ಹೋದನು?
೪. ಧ್ರುವನು ದೇವರಿಂದ ಯಾವ ವರಗಳನ್ನು ಬೇಡಿಕೊಂಡನು?
೫. ಧ್ರುವನ ಕಥೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.
೬. ನಾಡು - ಕಾಡು, ಸುಖ - ದುಃಖ, ಹರಸು - ಶಪಿಸು ಇವು ವಿರುದ್ಧಾರ್ಥ ಹೇಳುವ ಜೋಡು ಶಬ್ದಗಳು. ಇಂಥ ಬೇರೆ ಶಬ್ದಗಳನ್ನು ಹೇಳಿರಿ.
೭. ಕೆಳಗಿನ ಶಬ್ದಗಳ ಅರ್ಥ ಹೇಳಿರಿ:
ಕಡು, ಪೊಡವಿ, ಪೊಡವಿಪ, ಬೆಂಬತ್ತಿ, ಮುದದಿಂದ, ಜನನಿ

# ೨೭. ಕಣ್ಣುಪಟ್ಟಿ



ಈ ಚಿತ್ರದಲ್ಲಿರುವ ಪ್ರಾಣಿ ಯಾವದೆಂಬದು ನಿಮಗೆ ಗೊತ್ತಿದೆಯೇ? ಇದು ಜಗತ್ತಿನಲ್ಲಿ ಒಂದು ವಿಚಿತ್ರವಾದ ಪ್ರಾಣಿ. ಇದನ್ನು ಕಣ್ಣುಪಟ್ಟಿ ಎಂದು ಕರೆಯುತ್ತಾರೆ. ಇದು ರೆಕ್ಕೆಗಳುಳ್ಳ ಚಿಕ್ಕ ಇಲಿಯಂತೆ ಇದೆ. ಇದರ ರೆಕ್ಕೆಗಳಲ್ಲಿ ಇರುವ ಎಲುವುಗಳು ಮೂರು ಬೆರಳು, ಒಂದು ಕಿರಿ ಹೆಬ್ಬೆರಳು ಇವುಗಳಂತೆ ಕಾಣುವವು ಇದರ ರೆಕ್ಕೆ ಅಂಗೈಯಂತೆ ಕಾಣುವದು. ಇದರ ಶರೀರ ಮತ್ತು ರೆಕ್ಕೆಗಳ ಮೇಲಿರುವ ತೊಗಲು ಮೃದುವಾದ ಉಣ್ಣೆಯ ವಸ್ತ್ರ ಹೊಚ್ಚಿದಂತೆ ಇರುವದು.

ಇದರ ಮೈಬಣ್ಣ ಕಂದಿ. ಇದು ಸುಮಾರು ೩ ಇಂಚು ಉದ್ದವಿರುವದು. ಕಣ್ಣುಪಟ್ಟಿಗೆ ಕಣ್ಣಿಲ್ಲವೆಂದು ಸಾಮಾನ್ಯವಾಗಿ ಜನರ ತಿಳಿವಳಿಕೆ. ಆದರೆ ಅದು ನಿಜವಲ್ಲ. ಅದಕ್ಕೆ ಬಹಳ ತೀಕ್ಷ್ಣ ಕಣ್ಣುಗಳುಂಟು. ಕಣ್ಣುಪಟ್ಟಿಯ ರೆಕ್ಕೆಗಳೂ ಬಲು ಸೋಜಿಗವಾದವು. ಅವುಗಳಲ್ಲಿರುವ ಸೂಕ್ಷ್ಮ ನರಗಳಿಂದ ಗಾಳಿಯ ತೀರ ಸಣ್ಣ ಚಲನವನ್ನು ಅವು ತಿಳಿಯಬಲ್ಲವು. ಯಾವದಾದರೂ ತೀರ ಸಣ್ಣ ವಸ್ತುವನ್ನು ಕೂಡ ಈ ನರಗಳ ಸಹಾಯದಿಂದ ತಿಳಿಯಬಲ್ಲವು. ಆದದರಿಂದ ಅವು ರಾತ್ರಿಯಲ್ಲಿ ಗಿಡದಿಂದ ಗಿಡಕ್ಕೆ ಟೊಂಗೆಗಳಿಗೆ ತಾಕದೆ ಹಾರಾಡಬಲ್ಲವು.

ಒಬ್ಬ ಶಾಸ್ತ್ರಜ್ಞನು ಕಣ್ಣಿಕಪ್ಪಡಿಯ ಬಗ್ಗೆ ಒಂದು ಪ್ರಯೋಗವನ್ನು ಮಾಡಿ, ಆಶ್ಚರ್ಯಕರವಾದ ಸಂಗತಿಯನ್ನು ಕಂಡುಹಿಡಿದಿರುವನು. ಅವನು ಕೆಲವು ಕಣ್ಣಿಕಪ್ಪಡಿಗಳ ಕಣ್ಣುಗಳನ್ನು ಕಟ್ಟಿದನು. ಒಂದು ಕೋಣೆಯಲ್ಲಿ ಅತ್ತಿತ್ತ ತುಸು ಅಂತರ ಉಳಿಯುವಂತೆ ತಂತಿಗಳನ್ನು ಮೇಲ್ಛದಿಗೆ ಹೆಣೆದನು. ಆ ಕೋಣೆಯಲ್ಲಿ ಕಣ್ಣು ಕಟ್ಟಿದ ಕಣ್ಣಿಕಪ್ಪಡಿಗಳನ್ನು ಬಿಟ್ಟನು. ಅವು ಕೋಣೆಯಲ್ಲಿ ಹಾರಾಡಹತ್ತಿದವು. ಆದರೆ ಅವುಗಳಲ್ಲಿ ಒಂದೂ ತಂತಿಗೆ ತಾಕಲಿಲ್ಲ. ತಂತಿಯ ಸಮೀಪಕ್ಕೆ ಬಂದಾಗ ಅವು ರೆಕ್ಕೆಗಳನ್ನು ಮಡಿಚಿ ಸಂದಿಯೊಳಗಿಂದ ಪಾರಾಗಿ ಹೋಗುತ್ತಿದ್ದವು. ಸಮೀಪದಲ್ಲಿದ್ದ ವಸ್ತುಗಳನ್ನು ರೆಕ್ಕೆಗಳ ಸಹಾಯದಿಂದ ಕಾಣಬಲ್ಲವೆಂಬುದನ್ನು ಅವನು ಕಂಡುಹಿಡಿದನು.

ಕಪ್ಪಡಿ ಎಂದರೆ ಅರಿವೆಯ ತುಂಡು. ಕಣ್ಣಿಕಪ್ಪಡಿಯ ರೆಕ್ಕೆ ಒಂದು ನಯವಾದ ಉಣ್ಣೆಯ ಅರಿವೆಯ ತುಂಡಿನಂತೆ ಅದೆ. ಅದರಲ್ಲಿರುವ ನರಗಳು ಇದಕ್ಕೆ ಕಣ್ಣಿನಂತೆ ಉಪಯುಕ್ತವಿರುವದರಿಂದ ಇದಕ್ಕೆ ಕಣ್ಣಿಕಪ್ಪಡಿ ಎಂದು ಹೆಸರು ಬಂದಿರಬಹುದು.

ಕೆಂಪು ಬಣ್ಣದ ತನ್ನ ಚಿಕ್ಕ ಬಾಯಿಯನ್ನು ತೆರೆದು ಅದು ಅತ್ತಿತ್ತ ಹಾರಾಡುವದು. ಆಗ ತನ್ನ ಅಳವಿನಲ್ಲಿ ಬಂದ ಹುಳಗಳನ್ನು ತಿನ್ನುವದು. ಒಮ್ಮೊಮ್ಮೆ ಟೊಂಗೆಗಳ ಮತ್ತು ಹೂಗಳ ಮೇಲಿನ ಹುಳಗಳನ್ನು ಎಳೆಕ್ಕೊಂಡು ತಿನ್ನುವದು. ಅದರ ಹಿಂಗಾಲು ಮತ್ತು ಬಾಲಗಳಿಗೆ ಹೊಂದಿಕೊಂಡಿರುವ ತಿಳುವಾದ ತೊಗಲನ್ನು ಹುಳಗಳನ್ನು ಹಿಡಿಯಲು ಬಲೆಯಂತೆ ಉಪಯೋಗಿಸಿಕೊಳ್ಳುವದು. ಅತ್ತಿತ್ತ ಹಾರಾಡುವಾಗ ಅದರೊಳಗೆ ಸಿಕ್ಕ ಹುಳಗಳನ್ನು ತಿನ್ನುವದು.

ಕಣ್ಣಿಕಪ್ಪಡಿ ನಮ್ಮಗೆಳೆಯ. ಪತಂಗ, ಕೀಡಿ, ಜೊಂಡಿಗ ಮೊದಲಾದ ಪ್ರಾಣಿಗಳನ್ನು ಅದು ತಿನ್ನುವದು. ನಮಗೆ ಚಳಿಜ್ವರವನ್ನುಂಟು ಮಾಡುವ ಗುಂಗಾಡುಗಳನ್ನು ಅದು ವಿಪುಲವಾಗಿ ತಿನ್ನುವದು. ಚಳಿಜ್ವರವು ಹೆಚ್ಚಾಗಿ ಹಬ್ಬಿದ ಪ್ರದೇಶಗಳಲ್ಲಿ ಇವುಗಳನ್ನು ಸಾಕುವರು. ಇವು ಇರಲು ಅನುಕೂಲತೆ ಮಾಡಿಕೊಡುವರು. ಎಷ್ಟೋ ಹುಳಗಳು ರಾತ್ರಿಯಲ್ಲಿ ಆಹಾರಕ್ಕಾಗಿ ಸಂಚರಿಸುವವು. ಅಂಥ ಹುಳಗಳನ್ನು ತಿನ್ನುವದಕ್ಕಾಗಿ ಕಣ್ಣಿಕಪ್ಪಡಿಗಳು ರಾತ್ರಿಯಲ್ಲಿ ಹಾರಾಡುವವು.



ಕಣ್ಣುಪ್ಪಡಿ ಹೊಲಸು ಪ್ರಾಣಿಯೆಂದು ಕೆಲವರ ನಂಬಿಗೆ. ಆದರೆ ಅದು ನಿಜವಲ್ಲ. ಕಣ್ಣುಪ್ಪಡಿಯು ತನ್ನ ಮೈಯನ್ನು ಸ್ವಚ್ಛವಾಗಿ ಇಟ್ಟುಕೊಳ್ಳಲು ಬಹಳ ಹೆಣಗುವದು. ರೆಕ್ಕೆಗಳಿಗೆ ಹೊಲಸು ಹತ್ತಿದರೆ ಅದನ್ನು ತನ್ನ ಹಲ್ಲುಗಳಿಂದ ಕೆರೆದು, ನಾಲಿಗೆಯಿಂದ ನೆಕ್ಕಿ ಸ್ವಚ್ಛಮಾಡಿ ಕೊಳ್ಳುವದು. ಅದು ತನ್ನ ಬಾಯಿಯನ್ನೂ, ರೆಕ್ಕೆಗಳನ್ನೂ ನೆಕ್ಕಿ ನೆಕ್ಕಿ ಹಸನಾಗಿ ಇಟ್ಟುಕೊಳ್ಳುವದು.

ಕಣ್ಣುಪ್ಪಡಿಯು ಕತ್ತಲೆಯ ಗವಿಗಳಲ್ಲಿ, ಗುಡಿಗುಂಡಾರಗಳಲ್ಲಿ ವಾಸಿಸುವದು. ತನ್ನ ಮನೆ ಕಟ್ಟಿಕೊಳ್ಳುವದು ಅದಕ್ಕೆ ಗೊತ್ತಿಲ್ಲ. ಹಾಗಾದರೆ, ಆಹಾರಕ್ಕಾಗಿ ಹೊರಗೆ ಹೋಗುವಾಗ ಹೆಣ್ಣು ಕಣ್ಣುಪ್ಪಡಿಯು ತನ್ನ ಮರಿಗಳನ್ನು ಎಲ್ಲಿ ಇಡುವದು? ಇದು ನಿಮಗೆ ಗೊತ್ತಿದೆಯೇ? ಮರಿಗಳು ತಾಯಿಯ ಶರೀರವನ್ನು ಅವಚಿಕೊಳ್ಳುವವು ಅವುಗಳನ್ನು ಹೊತ್ತುಕೊಂಡು ತಾಯಿ ಕಣ್ಣುಪ್ಪಡಿ ಆಹಾರಕ್ಕಾಗಿ ಹಾರಾಡುವದು. ಮರಿಗಳು ಬೆಳೆದು ದೊಡ್ಡವಾಗಲಿಕ್ಕೆ ಸುಮಾರು ಐದು ವಾರಗಳು ಬೇಕು. ಆ ಮೇಲೆ ತಾಯಿ ಕಣ್ಣುಪ್ಪಡಿ ಗಿಡದ ಟೊಂಗೆಗೆ ಅವುಗಳನ್ನು ತೂಗಹಾಕಿ ಹೋಗುವದು. ಮರಿಗಳು ದೊಡ್ಡವಾಗಿ ತಮ್ಮ ಆಹಾರವನ್ನು ತಾವೇ ದೊರಕಿಸಲು ಸಮರ್ಥವಾಗುವ ವರೆಗೆ ತಾಯಿ ಕಣ್ಣುಪ್ಪಡಿಯು ಮೊಲೆಯುಣಿಸುವದು. ಕಣ್ಣುಪ್ಪಡಿಯು

ತನ್ನ ಹಿಂಗಾಲಿನ ಉಗುರುಗಳಿಂದ ಗಿಡದ ಟೊಂಗೆಯನ್ನು ಹಿಡಿದು ತಲೆ ಕೆಳಗಾಗಿ ಜೋತುಬಿದ್ದು ನಿದ್ದೆ ಮಾಡುವದು.

ಜಗತ್ತಿನಲ್ಲಿ ನಾನಾ ಪ್ರಕಾರದ ಕಣ್ಣುಕಪ್ಪಡಿಗಳುಂಟು. ಕೆಲವು ಸಣ್ಣವು; ಕೆಲವು ದೊಡ್ಡವು. ದೊಡ್ಡ ಕಣ್ಣುಕಪ್ಪಡಿಗಳಿಗೆ ಬಾವುಲಿ ಅಥವಾ ತೊಗಲ ಬಾವುಲಿ ಎಂದು ಕರೆಯುವರು. ೫ ಫೂಟು ಉದ್ದ, ೫ ಫೂಟು ಅಗಲ ರೆಕ್ಕೆಗಳುಳ್ಳ ಬಾವುಲಿಗಳು ಇರುವದುಂಟು.

ಕಣ್ಣುಕಪ್ಪಡಿಯ ಬಗ್ಗೆ ಈಗ ನೀವು ಓದಿದಿರಿ. ಇದು ಪಶುವೋ, ಪಕ್ಷಿಯೋ ಎಂಬದನ್ನು ನೀವು ಹೇಳಬಲ್ಲಿರಾ? ಅದು ಪಶುವಿನಂತೆ ಮರಿಗಳನ್ನು ಈದು, ಮೊಲೆಯುಣಿಸುವದು; ಆದರೆ ಅದು ನೆಲದ ಮೇಲೆ ಓಡಾಡುವದಿಲ್ಲ. ಅದು ಪಕ್ಷಿಯಂತೆ ಹಾರಾಡಬಲ್ಲದು; ಆದರೆ ಅದು ಪಕ್ಷಿಗಳಂತೆ ತತ್ತಿಯನ್ನು ಇಡುವದಿಲ್ಲ. ಇದು ಎಂಥ ವಿಚಿತ್ರ ಪ್ರಾಣಿ!

**ಅಭ್ಯಸನಗಳು:—**

೧. ಕಣ್ಣುಕಪ್ಪಡಿಯ ಮೈಬಣ್ಣ ಯಾವದು?
೨. ಕಣ್ಣುಕಪ್ಪಡಿಗೆ ಕಣ್ಣಿಲ್ಲವೆಂದು ತಿಳಿಯುವದು ತಪ್ಪು. ಅದು ಯಾಕೆ?
೩. ಶಾಸ್ತ್ರಜ್ಞನು ಯಾವ ಪ್ರಯೋಗವನ್ನು ಮಾಡಿದನು?
೪. ಅದಕ್ಕೆ ಕಣ್ಣುಕಪ್ಪಡಿ ಎಂಬ ಹೆಸರು ಯಾಕೆ ಬಂದಿತು?
೫. ಅದು ಹುಳಗಳನ್ನು ಹೇಗೆ ಹಿಡಿಯುವದು?
೬. ಕಣ್ಣುಕಪ್ಪಡಿ ನಮ್ಮ ಗೆಳೆಯ. ಅದು ಹೇಗೆ?
೭. ಕಣ್ಣುಕಪ್ಪಡಿಯು ತನ್ನ ಮರಿಗಳನ್ನು ಹೇಗೆ ಜೋಪಾನ ಮಾಡುವದು?
೮. ಕಣ್ಣುಕಪ್ಪಡಿ ಎಲ್ಲಿ ವಾಸಿಸುವದು? ಅದು ಹೇಗೆ ನಿದ್ದೆ ಮಾಡುವದು?
೯. ಕಣ್ಣುಕಪ್ಪಡಿಯು ವಿಚಿತ್ರ ಪ್ರಾಣಿಯೆಂದು ಯಾಕೆ ಹೇಳುವರು?

## ೨೮. ನಾನು ಯಾರು?

ನಾನು ಸಣ್ಣ ಹುಳ. ನನಗೆ ರೆಕ್ಕೆಗಳಿವೆ, ನಿಮ್ಮನ್ನು ಕಡಿದು ನಿಮ್ಮ ಮೈಯೊಳಗೆ ಚಳಿಜ್ವರದ ಜಂತುಗಳನ್ನು ಸೇರಿಸುತ್ತೇನೆ. ಆಗ ನಿಮಗೆ ಚಳಿಜ್ವರವು ಬರುವದು. ತೇವು ಇದ್ದಲ್ಲಿ ನನ್ನ ಸಂತತಿ ಬೆಳೆಯುವದು. ನಾನು ಯಾರು ಹೇಳಬಲ್ಲಿರಾ?

ನಾನು ಚಿಕ್ಕ ಪ್ರಾಣಿ. ಒಕ್ಕಲಿಗನ ಕಾಳುಗಳನ್ನು ತಿಂದು ಹಾಳು ಮಾಡುತ್ತೇನೆ. ಅಡಿಗೆಮನೆಯ ಪಾತ್ರೆಯೊಳಗಿನ ಆಹಾರವನ್ನು ಒಯ್ಯುತ್ತೇನೆ. ಅಂಗಡಿಗಳಲ್ಲಿರುವ ಆಹಾರ ಪದಾರ್ಥಗಳನ್ನು ನಾಶ ಮಾಡುತ್ತೇನೆ. ಮನೆಗಳಲ್ಲಿ ಗುದ್ದು ತೋಡುತ್ತೇನೆ. ನಾನು ಯಾರು?

ನಾನು ಇಲಿಗಳನ್ನು ತಿನ್ನುತ್ತೇನೆ. ಹುಳಗಳನ್ನು ಸಹ ತಿನ್ನುತ್ತೇನೆ. ಪೇರಲ ಹಣ್ಣಿನ ಮೇಲೆ ನನಗೆ ಬಹಳ ಪ್ರೀತಿ. ಹಗಲು ನಾನು ಮಲಗುತ್ತೇನೆ. ರಾತ್ರಿಯಲ್ಲಿ ಬೇಟೆಗಾಗಿ ಅಲೆಯುತ್ತೇನೆ. ನಾನು ಪಶುವೂ ಅಲ್ಲ; ಪಕ್ಷಿಯೂ ಅಲ್ಲ. ನಾನು ವಿಚಿತ್ರ ಪ್ರಾಣಿ! ನಾನು ಯಾರು ಅರಿಯ ಬಲ್ಲಿರಾ?

ಸಸಿಗಳು ಬೆಳೆಯಲು ನಾನು ಸಹಾಯ ಮಾಡುತ್ತೇನೆ. ನೀವು ನನ್ನನ್ನು ನೋಡಲಾರಿರಿ. ಒಮ್ಮೊಮ್ಮೆ ಮೋಡಗಳು ನನ್ನನ್ನು ಮುಸುಕುವವು. ನಾನು ಅಡಗಿದರೂ ನನ್ನ ಇರವನ್ನು ನೀವು ಅರಿಯುವಿರಿ. ಬೇಸಗೆಯಲ್ಲಿ ನನ್ನ ತಾಪ ಹೆಚ್ಚು. ನಾನು ನಿಮಗೆ ಬೆಳಕು ಕೊಡುವೆ. ನಾನು ಹುಟ್ಟುವಾಗ ನನ್ನ ಮೈಬಣ್ಣ ಕೆಂಪು; ಆಗ ನನ್ನ ಆಕಾರ ದೊಡ್ಡದು. ಮೇಲೆ ಏರಿದಂತೆ ನಾನು ಚಿಕ್ಕವನಾಗಿ ಕಾಣುವೆ; ಬೆಳ್ಳಗೆ ಆಗುವೆ. ನಾನು ಯಾರು ಗೊತ್ತಿದೆಯೇ?

ನಾನು ಎಲ್ಲರಿಗೂ ಬೇಕು. ನಿಮಗೆ ನಾನು ಕಾಣುವದಿಲ್ಲ. ನಿಮ್ಮೆಲ್ಲರ ಸುತ್ತಲೂ ಇದ್ದೇನೆ. ನಾನಿಲ್ಲದೆ ನೀವು ಬದುಕಲಾರಿರಿ. ನಾನು ಯಾರು ತಿಳಿಯಬಲ್ಲಿರಾ?

ನಾನು ಭೂಮಿಯಲ್ಲಿ ಇರುವೆ; ಸಮುದ್ರದ ನೀರಲ್ಲಿ ಹೆಚ್ಚಾಗಿ ಇರುವೆ. ನನ್ನ ಬಣ್ಣ ಬಿಳಿದು. ನಾನಿಲ್ಲದೆ ನಿಮ್ಮ ಊಟವು ರುಚಿಯೆನಿಸುವದಿಲ್ಲ. ನನ್ನ ಉಪಯೋಗ ಬಹಳ. ನನ್ನ ಹೆಸರೇನು?

ದೊಡ್ಡ ಅಡವಿಗಳು ನನ್ನ ಮೈ ಮೇಲೆ ಬೆಳೆಯುತ್ತವೆ. ನನ್ನ ಹೊಟ್ಟೆಯೊಳಗೆ ಖನಿಜ ಪದಾರ್ಥಗಳು ಸಿಗುವವು. ಒಂದೊಂದು ಕಡೆ ಮೈಲಿಗಿಂತ ಹೆಚ್ಚು ಎತ್ತರವಾಗಿರುವೆ. ಮೋಡಗಳನ್ನು ತಡೆಯುವೆ. ನಾನು ಯಾರು ನಿಮಗೆ ತಿಳಿಯಿತೇ?

ನಾನು ಸಣ್ಣ ಗಿಡ. ನನ್ನ ಬೀಜಗಳ ಸುತ್ತಲೂ ಮೃದುವಾದ ಹೊದಿಕೆಯುಂಟು. ಅದರಿಂದ ಬಟ್ಟೆಯನ್ನು ಮಾಡುವರು. ನನ್ನ ಬೀಜಗಳನ್ನು ದನಗಳು ಪ್ರೀತಿಯಿಂದ ತಿನ್ನುವವು. ಅವುಗಳಿಂದ ಎಣ್ಣೆ ತೆಗೆಯುವರು. ಹೂಗಳು ಹಳದಿ ಇರುವವು; ನಾನು ಉಷ್ಣ ಪ್ರದೇಶದಲ್ಲಿ ಬೆಳೆಯುವೆ. ನನ್ನಿಂದ ನಿಮ್ಮ ಮೈಯ ರಕ್ಷಣೆ! ನನ್ನಿಂದ ನಿಮಗೆ ಶೋಭೆ! ನಾನು ಯಾರು?

ನನ್ನ ಬಣ್ಣ ಕಪ್ಪು. ನಾನು ಬಲು ಬಿರುಸು. ನೀರಿಗೆ ಉಗಿಯ ರೂಪವನ್ನು ಕೊಟ್ಟು ಬಂಡಿಯನ್ನು ನಡೆಯಿಸುವ ಶಕ್ತಿಯನ್ನು ಕೊಡಬಲ್ಲೆ. ಜನರು ನನ್ನನ್ನು ಭೂಮಿಯೊಳಗಿಂದ ತೆಗೆಯುವರು. ನನ್ನ ಹೆಸರೇನು?

ನನ್ನನ್ನು ಕಂಡರೆ ಜನರಿಗೆ ಭಯ; ಆದರೆ ನಾನು ಅವರಿಗೆ ಆಹಾರವನ್ನು ಬೆಯಿಸಿ ಕೊಡುವೆ; ಬೆಳಕು ಕೊಡುವೆ. ಗಾಳಿಗೆ ಬಲಿಯುವೆ. ನೀರಿಗೆ ಕುಗ್ಗುವೆ. ನಾನು ಎಲ್ಲರಿಗೂ ಬೇಕು. ನನ್ನನ್ನು ಗುರುತಿಸಬಲ್ಲಿರಾ?

**ಅಭ್ಯಸನಗಳು:—**

ಈ ಪಾಠದಲ್ಲಿ ಕೊಟ್ಟ ಒಗಟುಗಳನ್ನು ಬಿಡಿಸುವ ಕೆಲವು ಶಬ್ದಗಳನ್ನು ಕೆಳಗೆ ಕೊಟ್ಟಿದೆ; ಅವುಗಳನ್ನು ಗುರುತಿಸಿರಿ; ಬಳಿಕ ಅನುಕ್ರಮವಾಗಿ ಹೊಂದಿಸಿರಿ; ಈ ಪಾಠಕ್ಕೆ ಸಂಬಂಧವಿಲ್ಲದ ಶಬ್ದಗಳನ್ನು ಬೇರೆ ತೋರಿಸಿರಿ:

ಕಲ್ಲಿದ್ದಲಿ, ಕೊಡೆ, ಹವೆ, ನೀರು, ಬೆಂಕಿ, ಸೂರ್ಯ, ಇಲಿ, ಗುಂಗಾಡು, ಉಪ್ಪು, ಹತ್ತಿಯ ಗಿಡ, ಪರ್ವತ, ಕಣ್ಣಪ್ಪಡಿ, ನೊಣ

## ೨೯. ತೋಳನ ತೀರ್ಪು

ಗೌಡನೊಬ್ಬ ಕುರಿಯನೊಂದ
ಕೋರ್ಟಿಗೆಳೆದುಕೊಂಡು ಬಂದ.
ಕೋರ್ಟಿಗೆಳೆದು ತಂದು ಅದರ
ಮೇಲೆ ಫಿರ್ಯಾದೊಂದ ತಂದ.
ತೋಳ ಅಲ್ಲಿ, ನ್ಯಾಯಮೂರ್ತಿ,
ತಪ್ಪು ಕಂಡು ಹಿಡಿವೆನೆಂದು,
ಜಗಳಕಾದ ಕಾರಣವನು
ಕೇಳಿ ತೀರ್ಪು ಕೊಡುವೆನೆಂದು,
ಕೇಳಿತಿತ್ತ ವಾದಿಯ
ಅತ್ತ ಪ್ರತಿವಾದಿಯ




ಗೌಡನೆಂದ "ದೇವರೂ!
ಹಟ್ಟಿಯಲ್ಲಿ ನೋಡಲಾಗಿ
ಎರಡು ಕೋಳಿಯಿಲ್ಲ! ಸೂರ್ಯ
ಬರುತಲಿದ್ದ ಮೂಡಲಿಂದ
ಬರಿಯ ಮೂಳೆ ಪಕ್ಕ ಮಾತ್ರ
ಕಾಣುತಿದ್ದಿತು".
ಕುರಿಯು ನಿಂತು "ರಾತ್ರಿ ನನಗೆ
ಗಾಢ ನಿದ್ರೆ – ಘೋರ ನಿದ್ರೆ
ಅಕ್ಕ ಪಕ್ಕದವರ ಸಾಕ್ಷಿ
ಕೇಳಿ ನಿಮಗೆ ಬೇಕಾಗಿದ್ರೆ.
ಹಿಂದೆಯಾಗಲಿಂದೆಯಾಗ
ಲೆಂದು ನಾನು ಕದ್ದುದಿಲ್ಲ.
ಕುರಿಯು ಕೋಳಿ ತಿಂದಿತೆಂದು
ನುಡಿದರಾರು ಹಾಳು ಸೊಲ್ಲ?"
ಎಂದು ಹೇಳಿತು.
ತೋಳ ಕೇಳಿತು.
ತೋಳವೆದ್ದು ಬಾಲದಿಂದ
ಮೇಜು ಕುಟ್ಟಿತು.

ನಾಲಗೆಯನು ಸವರಿಸುತ್ತ
ತೀರ್ಪು ಕೊಟ್ಟಿತು:
"ಕುರಿಯ ಮಾತ ನಂಬಲಾರೆ
ಕಳ್ಳರೆಲ್ಲ ತಮ್ಮ ಕೆಟ್ಟ
ಹಂಚಿಕೆಗಳ ಗುಟ್ಟಾಗಿ
ಇಡುವರೆಂದು ಬಲ್ಲರೆಲ್ಲ.
ಗೌಡನೆಂದ ಮಾತಿನಂತೆ
ಕುರಿಯೆ ರಾತ್ರಿ ಕಾವಲಿತ್ತು.
ಬಾಯಿ ಚಪಲ ತಡೆಯಲೇನು?
ಕುರಿಯು ಬೈರಾಗಿಯೇನು!
ಕೋಳಿ ತಿನ್ನಬಾರದೆಂದು
ಅದರ ಮನದಲೆಲ್ಲಿ ಬಂತು!
ಕುರಿಯ ತಪ್ಪು ನಿಲುವುದೆದ್ದು
ನಿಲುವನಿಲ್ಲಿ ಗೌಡ ಗೆದ್ದ.
ಕುರಿಯು ಗೈದ ತಪ್ಪಿಗಾಗಿ
ದಂಡವಿದುವೆ ತೀವ್ರವಾಗಿ:
ಕುರಿಯ ಮಾಂಸ ನನಗೆ ಬರಲಿ!
ಅದರ ಚರ್ಮ ಗೌಡ ಹೊರಲಿ!
ಹೀಗೆ ತೋಳವೆದ್ದು ನಿಂತು
ತೀರ್ಪು ಕೊಟ್ಟಿತು.
ಹಸಿದ ತನ್ನ ಹೊಟ್ಟೆಗೊಂದು
ಮಾರ್ಪು ಕೊಟ್ಟಿತು.

ಅಭ್ಯಸನಗಳು:—

೧. ಗೌಡನು ಯಾರ ಮೇಲೆ ಫಿರ್ಯಾದಿ ಮಾಡಿದನು ?
೨. ನ್ಯಾಯಮೂರ್ತಿ ಯಾರು ಆಗಿದ್ದರು ?
೩. ಗೌಡನು ನ್ಯಾಯಮೂರ್ತಿಗೆ ಏನು ಹೇಳಿದನು?
೪. ಕುರಿಯು ಏನು ಹೇಳಿತು?
೫. ತೋಳವು ಕುರಿಯ ಮೇಲೆ ಹೇಗೆ ತಪ್ಪನ್ನು ಹೊರಿಸಿತು ಮತ್ತು ಏನೆಂದು ತೀರ್ಪು ಕೊಟ್ಟಿತು?

# ೩೦. ಭಗೀರಥ

ಬಹಳ ಕಾಲದ ಹಿಂದಿನ ಕಥೆ. ಆಗ ನಮ್ಮ ದೇಶದಲ್ಲಿ ಭಗೀರಥ ಎಂಬ ಅರಸನು ಆಗಿಹೋದನು. ಅವನು ಬಹು ಭಾಗ್ಯವಂತನು. ಕಠಿಣವಾದ ಕೆಲಸವನ್ನು ಕೂಡ ಗಟ್ಟಿ ಮನಸ್ಸಿನಿಂದ ಮಾಡುವವನು.

ಈತನ ಮುತ್ತಜ್ಜ ಸಗರ ಎಂಬವನು. ಅವನಿಗೆ ಅರವತ್ತು ಸಾವಿರ ಜನ ಮಕ್ಕಳು. ಅವರೆಲ್ಲರಿಗೆ ಪಾತಾಳಲೋಕದಲ್ಲಿದ್ದ 'ಕಪಿಲ' ಎಂಬ ಋಷಿಯ ಶಾಪವಾಯಿತು. ಆ ಶಾಪದಿಂದ ಅವರು ಸುಟ್ಟು ಬೂದಿಯಾದರು. ಸುಟ್ಟುಕೊಂಡು ಸತ್ತವರಿಗೆ ಸದ್ಗತಿ ಇಲ್ಲ. ಭಗೀರಥನಿಗೆ ಮೊದಲಿನಿಂದ ಈ ಚಿಂತೆ ಹತ್ತಿತು. ತನ್ನ ಆ ಹಿರಿಯರಿಗೆ ಸದ್ಗತಿ ಆಗಬೇಕು, ಏನಾದರೂ ಪ್ರಯತ್ನ ಮಾಡಿ, ಅವರಿಗೆ ಸದ್ಗತಿ ಹೊಂದಿಸಬೇಕು. ಎಂದು ಆತನು ಯಾವಾಗಲೂ ಚಿಂತಿಸುತ್ತಿದ್ದನು.

ಭಗೀರಥನು ಪಾತಾಳದಲ್ಲಿದ್ದ ಕಪಿಲ ಋಷಿಯ ಬಳಿಗೆ ಹೋದನು. "ಸ್ವಾಮೀ, ನನ್ನ ಹಿರಿಯರು ತಮ್ಮ ಶಾಪದಿಂದ ಸುಟ್ಟು ಬೂದಿಯಾದರು. ಅವರಿಗೆ ಸದ್ಗತಿಯಾಗುವ ಉಪಾಯವನ್ನು ದಯಮಾಡಿ ಹೇಳಿರಿ," ಎಂದು ಬೇಡಿಕೊಂಡನು. ಆತನು ಹೀಗೆ ಹೇಳಿದನು — "ಅಯ್ಯಾ, ನೀನು ದೇವಲೋಕದ ಗಂಗಾ ನದಿಯು ಇತ್ತ ಬರುವಂತೆ ಮಾಡು. ನಿನ್ನ ಹಿರಿಯರು ಬೂದಿಯಾದಲ್ಲಿ ಆ ನದಿಯು ಹಾಯ್ದರೆ ಅವರಿಗೆ ಸದ್ಗತಿಯಾಗುವದು".

ಭಗೀರಥನು ಹಿಮಾಲಯ ಪರ್ವತಕ್ಕೆ ಹೋದನು. ಅಲ್ಲಿ ಬಹು ಕಾಲ ತಪಸ್ಸನ್ನು ಮಾಡಿದನು. ಆತನ ತಪಕ್ಕೆ ದೇವಗಂಗೆ ಮೆಚ್ಚಿದಳು. ದೇವಿಯ ರೂಪವನ್ನು ಧರಿಸಿ, ಆತನ ಮುಂದೆ ನಿಂತಳು. ಆಗ ಭಗೀರಥನು –"ತಾಯೀ, ನನ್ನ ಹಿರಿಯರು ಬೂದಿಯಾಗಿ ಬಿದ್ದ ಸ್ಥಳದ ಮೇಲೆ ನೀನು ಹರಿಯಬೇಕು. ಅವರಿಗೆ ಸದ್ಗತಿಯನ್ನು ಕೊಡಬೇಕು," ಎಂದು ಬೇಡಿಕೊಂಡನು. ದೇವಗಂಗೆಯು ಒಪ್ಪಿಕೊಂಡಳು.

ದೇವಗಂಗೆಯು ಇನ್ನು ದೇವಲೋಕದಿಂದ ಮೊದಲು ಹಿಮಾಲಯ ಪರ್ವತದ ಮೇಲೆ ಬೀಳುವಳು. ದೇವಗಂಗಾ ನದಿಯ ಪ್ರವಾಹವು ಸಾವಿರಾರು ಮೈಲು ಅಗಲ; ಅದು ಕೆಳಗೆ ದುಮುಕುವ ದೊಡ್ಡ ಸಪ್ಪಳಕ್ಕೆ ಮೂರು ಲೋಕಗಳ ಜನರ ಕಿವಿ ಗಡಚಿಕ್ಕಿದವು; ಆ ಪ್ರವಾಹದ

ಬಿಳಿಯ ಬೆಳಕಿಗೆ ಎಲ್ಲರ ಕಣ್ಣು ಕುಕ್ಕಿದವು. ನೂರಾರು ಮೈಲುಗಳ ವರೆಗೆ ಬಿಳಿಯ ನೊರೆ ಹರಡಿತು. ತುಂತುರ ಹನಿಗಳು ಮಂಜು ಕವಿದಂತೆ ಮುಗಿಲಲ್ಲಿ ಮುಸುಕಿಕೊಂಡವು. ಲೋಕಕ್ಕೆಲ್ಲ ಅಂಜಿಕೆ ಬಂದಿತು. ಜಗವೆಲ್ಲ ನೀರೊಳಗೆ ಮುಳುಗುವದೋ ಎಂದು ಎಲ್ಲರೂ ಗಾಬರಿಯಾದರು.

ಕೈಲಾಸದಲ್ಲಿರುವ ಶಿವನು ಇದನ್ನು ನೋಡಿದನು. "ಇಂಥ ದೊಡ್ಡ ಪ್ರವಾಹವು ಭೂಮಿಯ ಮೇಲೆ ಬಿದ್ದರೆ ಅದರ ಹೊಡೆತಕ್ಕೆ ಲೋಕವು ಉಳಿಯಲಾರದು. ಈ ಪ್ರವಾಹವನ್ನು ಒಮ್ಮೆಲೆ ಬೀಳಗೊಡಬಾರದು, ನಾನು ನನ್ನ ತಲೆಯ ಮೇಲೆ ಹಿಡಿಯಬೇಕು," ಎಂದು ಆಲೋಚಿಸಿದನು. ಕೂಡಲೆ ಆತನು ಹಿಮಾಲಯಕ್ಕೆ ಬಂದನು. ಟೊಂಕದ ಮೇಲೆ ಕೈಗಳನ್ನಿಟ್ಟುಕೊಂಡು ಗಟ್ಟಿಯಾಗಿ ನಿಂತುಕೊಂಡನು. ಮೇಲಿನಿಂದ ದುಮುಕುತ್ತಿರುವ ಆ ಗಂಗಾ ಪ್ರವಾಹವನ್ನು ತನ್ನ ತಲೆಯ ಮೇಲೆ ಬೀಳಿಸಿಕೊಂಡನು. ಅಷ್ಟು ದೊಡ್ಡ ಪ್ರವಾಹವು ಶಿವನ ಜಡೆಯೊಳಗೆ ಅಡಗಿಹೋಯಿತು. ಲೋಕವು ಕುತ್ತದಿಂದ ಪಾರಾಯಿತು.

ಆದರೆ ಭಗೀರಥನಿಗೆ ಮತ್ತೆ ಚಿಂತೆ ಆಯಿತು. ಇಷ್ಟು ಪ್ರಯತ್ನ ಮಾಡಿ ತಂದ ಗಂಗೆಯು ಎಲ್ಲಿ ಹೋದಳು? ಇನ್ನೇನು ಮಾಡಲಿ? ಎಂದು ಮರುಗುತ್ತ ಆತನು ಶಿವನಿಗೆ ಶರಣುಹೋದನು. ಬಗೆಬಗೆಯಿಂದ ಆತನನ್ನು ಬೇಡಿಕೊಂಡನು. ಶಿವನಿಗೆ ದಯೆ ಬಂದಿತು. ಆಗ ಆತನು ಒಂದು ಸಣ್ಣ ಹಳ್ಳದಷ್ಟು ಪ್ರವಾಹವನ್ನು ತನ್ನ ಜಡೆಯೊಳಗಿಂದ ಮೆಲ್ಲನೆ ಕೆಳಗೆ ಬೀಳಿಸಿದನು.

ಇನ್ನು ಭಗೀರಥನು ಆ ಪ್ರವಾಹಕ್ಕೆ ದಾರಿ ತೋರಿಸುತ್ತ ಪಾತಾಳಕ್ಕೆ ನಡೆದನು. ದಾರಿಯಲ್ಲಿ 'ಜಹ್ನು' ಎಂಬ ಋಷಿಯ ಗುಡಿಸಲು. ಆತನು ತನ್ನ ಗುಡಿಸಲ ಮೇಲೆ ಹಾಯುವ ಆ ಪ್ರವಾಹವನ್ನು ಕುಡಿದುಬಿಟ್ಟನು. ಭಗೀರಥನಿಗೆ ಮತ್ತೆ ಚಿಂತೆ ಬಂದಿತು. ಭಗೀರಥನು ಆ ಋಷಿಯ ಮುಂದೆ ತನ್ನ ಕಷ್ಟವನ್ನು ತೋಡಿಕೊಂಡನು. ಋಷಿಗೆ ಕರುಣೆ ಹುಟ್ಟಿತು. ಆಗ ಋಷಿಯು ಆ ಪ್ರವಾಹವನ್ನು ತನ್ನ ಕಿವಿಯಿಂದ ಹೊರಗೆ ಬಿಟ್ಟನು. ಭಗೀರಥನಿಗೆ ಹರುಷವಾಯಿತು.

ಒಳಿಕ ಭಗೀರಥನು ಆ ಪ್ರವಾಹಕ್ಕೆ ದಾರಿ ತೋರಿಸುತ್ತ ಪಾತಾಳಕ್ಕೆ ಬಂದನು. ಅಲ್ಲಿ ತನ್ನ ಹಿರಿಯರು ಬೂದಿಯಾಗಿ .ಬಿದ್ದ

ಸ್ಥಳದ ಮೇಲೆ ಆ ಪ್ರವಾಹವು ಹರಿಯುವಂತೆ ಮಾಡಿದನು. ಅವರಿಗೆ ಸದ್ಗತಿಯಾಯಿತು. ಭಗೀರಥನ ಪ್ರಯತ್ನವು ಕೈಗೂಡಿತು. ಈ ಮೇರೆಗೆ ಪಾತಾಳಕ್ಕೆ ಹೋಗುವ ದೇವಗಂಗೆಯು ಭೂಲೋಕದಲ್ಲಿಯೂ ಹರಿದಳು. ಭಗೀರಥನು ತಂದಂದಿನಿಂದ ಗಂಗಾ ನದಿಗೆ 'ಭಾಗೀರಥಿ' ಎಂಬ ಹೆಸರು ಬಂದಿತು. ಜಹ್ನು ಋಷಿಯ ಕಿವಿಯಿಂದ ಬಂದದರಿಂದ 'ಜಾಹ್ನವಿ' ಎಂಬ ಹೆಸರೂ ಬಂದಿರುವದು.

**ಅಭ್ಯಸನೆಗಳು:—**

೧) ಭಗೀರಥನು ತಪಸ್ಸನ್ನು ಯಾಕೆ ಮಾಡಿದನು?
೨) ಶಿವನು ಗಂಗೆಯನ್ನು ತನ್ನ ಜಡೆಯಲ್ಲಿ ಯಾಕೆ ಇಟ್ಟುಕೊಂಡನು?
೩) ಭಗೀರಥನು ಗಂಗಾ ಪ್ರವಾಹವನ್ನು ಪಾತಾಳಕ್ಕೆ ಹೇಗೆ ಒಯ್ದನು?
೪) ಗಂಗಾನದಿಗೆ ಭಾಗೀರಥಿ ಎಂದು ಹೆಸರು ಯಾಕೆ ಬಂದಿತು?

## ೩೧. ತೆಂಗಿನ ಮರ

ವೀರಣ್ಣನು ಗದುಗಿನಲ್ಲಿ ತೆಂಗಿನಕಾಯಿ ಅಂಗಡಿಯನ್ನು ಇಟ್ಟಿರುವನು. ಅಂಕೋಲೆಯ ಹೆಗ್ಗಡೆ ಮಂಜಪ್ಪನಿಂದ ತೆಂಗಿನ ಕಾಯಿಗಳನ್ನು ತರಿಸುವನು. ವೀರಣ್ಣನು ಒಮ್ಮೆ ಗೋಕರ್ಣ ಯಾತ್ರೆಗೆ ಹೋಗಿದ್ದನು. ಮರಳಿ ಬರುವಾಗ ಮಂಜಪ್ಪನನ್ನು ಕಾಣಬೇಕೆಂದು ಅಂಕೋಲೆಯಲ್ಲಿ ಇಳಿದನು. ಮಂಜಪ್ಪನ ಮನೆಗೆ ಹೋದನು.

ಮಂಜಪ್ಪನು ತನ್ನ ಮನೆಗೆ ಹೊಂದಿ ಇರುವ ತೋಟದಲ್ಲಿ ಇದ್ದನು. ತೆಂಗಿನ ಗಿಡಗಳಿಗೆ ಗೊಬ್ಬರ ಹಾಕುತ್ತಿದ್ದನು. ವೀರಣ್ಣನು ಬಂದನೆಂದು ಮಂಜಪ್ಪನಿಗೆ ಸಂಭ್ರಮವಾಯಿತು. ವೀರಣ್ಣಾ, ಮೊದಲು ಕೈಕಾಲು ತೊಳೆದುಕೊಂಡು ಬಾ, ಎಂದು ಆತನನ್ನು ಮನೆಯೊಳಗೆ ಕಳುಹಿದನು. ಬಳಿಕ ಏಳೆಂಟು ಎಳಗಾಯಿಗಳನ್ನು ಇಳಿಸಿದನು. ಅವುಗಳ ಮುಖದ ಕಡೆಗೆ ಕೊಯ್ತದಿಂದ ಸಿಪ್ಪೆಯನ್ನು ಕೆತ್ತಿ ಅವುಗಳ ಕಣ್ಣಿಗೆ ಕುಕ್ಕಿ ಕುಕ್ಕಿ ಇಟ್ಟನು. ಅಷ್ಟರಲ್ಲಿ ವೀರಣ್ಣನು ಬಂದನು. ಆತನಿಗೆ ಎರಡು ಮೂರು ಎಳಗಾಯಿಗಳನ್ನು ಕುಡಿಯಲಿಕ್ಕೆ ಕೊಟ್ಟನು. ಎಳನೀರನ್ನು ಕುಡಿಯಲು



ವೀರಣ್ಣನ ಬಳಲಿಕೆ ಹೊರಟು ಹೋಯಿತು. ಆತನು ಮಂಜಪ್ಪನೊಡನೆ ಮಾತಾಡುತ್ತ ಅಲ್ಲಿ ಕುಳಿತನು.

ವೀರಣ್ಣ:-ಮಂಜಪ್ಪಾ, ನಮ್ಮ ಕಡೆಗೆ ತೆಂಗಿನ ಮರಗಳು ಅಪರೂಪ; ಆದರೂ ಪೇಟೆಗೆ ತೆಂಗಿನ ಕಾಯಿಗಳು ಬೇಕಾದಷ್ಟು ಬರುವವು. ಜನರು ತೆಂಗಿನಕಾಯಿಗಳನ್ನು ದೇವರಿಗೆ ಒಡೆಯಿಸುವರು. ಅಡಿಗೆಗಳಲ್ಲಿ ಕೊಬ್ಬರಿಯನ್ನು ಹಾಕುವರು; ತೆಂಗಿನ ಕಡ್ಡಿಯ ಕಸಬರಿಗೆಗಳು ನಮ್ಮಲ್ಲಿಯ ಅಂಗಡಿಗಳಲ್ಲಿ ದೊರೆಯುವವು. ನೀರು ಸೇದಲಿಕ್ಕೆ ತೆಂಗಿನ ಕಾತಿಯ ಹಗ್ಗವಿಲ್ಲದಿದ್ದರೆ ನಡೆಯುವದಿಲ್ಲ. ಎರೆದುಕೊಳ್ಳಲಿಕ್ಕೆ ಕೊಬ್ಬರಿ ಎಣ್ಣೆಯನ್ನು ಉಪಯೋಗಿಸುವರು. ತೆಂಗಿನ ಮರದ ಉಪಯೋಗವು ನಮಗೆ ಇಷ್ಟು ಮಟ್ಟಿಗೆ ಆಗುವದು. ಆದರೂ ತೆಂಗಿನ

ಮರವು ಹೇಗೆ ಹುಟ್ಟುವದು? ಅದನ್ನು ಹೇಗೆ ಬೆಳೆಯಿಸುವರು? ಮುಂತಾದ ಹೆಚ್ಚಿನ ಸಂಗತಿಗಳನ್ನು ನಾವು ಅರಿಯೆವು.

ಮಂಜಪ್ಪ:— ವೀರಣ್ಣಾ, ಇಲ್ಲಿಯ ಮಣ್ಣನ್ನು ಹಿಡಿದು ನೋಡು. ಸ್ವಲ್ಪ ಉಸುಕು ಬೆರೆತಂತೆ ಇರುವದು. ಇಲ್ಲಿ ಮಳೆ ಬಹಳ. ಬಿಸಿಲು ಚೆನ್ನಾಗಿ ಬೀಳುವದು; ಇವೆಲ್ಲ ತೆಂಗಿನ ಮರಗಳಿಗೆ ಬೇಕು. ಬಲಿತ ತೆಂಗಿನ ಕಾಯಿಯ ಕಣ್ಣಿನಿಂದ ಮೊಳಕೆ ಹೊರಬೀಳುವದು. ಕಾಯಿ ಸಹಿತ ಅದನ್ನು ಸಣ್ಣ ಕುಣಿಯಲ್ಲಿ ನೆಡಬೇಕು. ಆಗಾಗ ಉಪ್ಪು ಬೆರೆತ ಗೊಬ್ಬರವನ್ನು ಹಾಕುತ್ತಿರಬೇಕು. ನಾಲ್ಕೈದು ವರ್ಷಗಳಲ್ಲಿ ಮರವು ೧೦-೧೨ ಮೊಳ ಎತ್ತರ ಆಗುವದು. ತೆಂಗಿನ ಮರವು ಬೆಳೆದು ೪೦-೫೦ ಮೊಳದ ವರೆಗೂ ಎತ್ತರವಾಗುವದುಂಟು. ಸೋಗೆಗಳ ಮಗ್ಗುಲಿಗೆ ಸಣ್ಣ ಕೊಂಬೆಯ ಹಾಗೆ ಹೂವಿನ ಗೊನೆ ಹೊರಡುವದು. ಅದು ಮೊದಲು ಹಾಳೆಯೊಳಗೆ ಮುಚ್ಚಿಕೊಂಡಿರುವದು. ಹೂವುಗಳಿಂದ ಕಾಯಿಗಳು ಆಗುತ್ತಲೇ ಇರುವವು. ವರ್ಷದಲ್ಲಿ ಎರಡು ಮೂರು ಬಾರಿ ಗೊನೆ ಬಿಡುವವು. ಒಂದು ಸಾರೆಗೆ ಒಂದೊಂದು ಮರಕ್ಕೆ ಐವತ್ತು, ಅರವತ್ತು ಕಾಯಿಗಳಾಗುತ್ತವೆ. ಸಮುದ್ರದ ದಂಡೆಯ ನಾಡುಗಳಲ್ಲಿ, ಮೈಸೂರು ಸಂಸ್ಥಾನದ ತಿಪಟೂರ, ಅರಸಿಕೆರೆ, ಮೊದಲಾದ ಪ್ರದೇಶಗಳಲ್ಲಿ ಈ ಮರಗಳು ವಿಶೇಷವಾಗಿ ಬೆಳೆಯುತ್ತವೆ.

ಹೀಗೆ ಮಾತು ನಡೆದಾಗ, ಮನೆಯಲ್ಲಿ ಊಟಕ್ಕೆ ಕರೆದರು. ಇಂದು ವೀರಣ್ಣನಿಗೆ ಕೊಬ್ಬರಿ ಅಡಿಗೆಯ ಮೇಜವಾನಿ. ಕೊಬ್ಬರಿಯ ವಡೆ; ಕೊಬ್ಬರಿಯ ಕಡುಬು; ಅನ್ನಕ್ಕೆ ಕೊಬ್ಬರಿಯ ಗೊಜ್ಜು; ದೋಸೆಗೆ ಕೊಬ್ಬರಿ ತಿರುವಿ ಮಾಡಿದ ಹಾಲು; ಬಾಡಿಸಿಕೊಳ್ಳಲಿಕ್ಕೆ ಕೊಬ್ಬರಿಯ ಚಟ್ನಿ; ತಾಜಾ ಕೊಬ್ಬರಿ ಎಣ್ಣೆಯಲ್ಲಿ ಕರಿದ ಹಪ್ಪಳ, ಸಂಡಿಗೆ! ವೀರಣ್ಣ ಕೊಬ್ಬರಿಯಲ್ಲಿ ಮುಳುಗಿ ಹೋದಂತಾಯಿತು. ಅವನಿಗೆ ಈ ಊಟವು ರುಚಿಯೆನಿಸಿತು.

ವೀರಣ್ಣನಿಗೆ ಇಷ್ಟು ಹೊತ್ತು ಮಂಜಪ್ಪನ ಮನೆಯ ಕಡೆಗೆ ಲಕ್ಷ್ಯವು ಹೋಗಿರಲಿಲ್ಲ. ಈಗ ನೋಡುತ್ತಾನೆ – ತೊಲೆ, ಕಂಬ, ಜಂತಿ

ಇವೆಲ್ಲ ತೆಂಗಿನವೇ. ಬಾಗಿಲ ಕಿಡಕಿಗಳ ಚೌಕಟ್ಟು ತೆಂಗಿನವು. ತಾನು ಕುಳಿತದ್ದು ಕಾತಿಯ ತಟ್ಟಿನ ಮೇಲೆ; ಬೆನ್ನಿಗೆ ಕಾತಿ ತುಂಬಿದ ತಕ್ಕೆ. ವೀರಣ್ಣನು:— "ತೆಂಗಿನ ಮರವು ಭೂಲೋಕದ ಕಲ್ಪವೃಕ್ಷ" ಎಂಬ ಮಾತನ್ನು ಕೇಳಿದ್ದನು. ಅದೀಗ ಆತನಿಗೆ ನಿಜವೆನಿಸಿತು.

**ಅಭ್ಯಸನಗಳು:—**

೧. ವೀರಣ್ಣನು ಒಮ್ಮೆ ಎಲ್ಲಿಗೆ ಹೋಗಿದ್ದನು?
೨. ಮರಳಿ ಬರುವಾಗ ಎಲ್ಲಿಗೆ ಇಳಿದನು?
೩. ವೀರಣ್ಣನು ಮಂಜಪ್ಪನ ತೆಂಗಿನ ತೋಟದಲ್ಲಿ ಏನು ಕುಡಿದನು?
೪. ತೆಂಗಿನ ಮರಗಳನ್ನು ಬೆಳೆಯಿಸುವ ರೀತಿಯನ್ನು ಹೇಳಿರಿ
೫. ಮಂಜಪ್ಪನ ಮನೆಯೆಲ್ಲಿ ಆದ ಕೊಬ್ಬರಿ ಅಡಿಗೆಯ ಮೇಜವಾನಿಯನ್ನು ವರ್ಣಿಸಿರಿ.
೬. ಮಂಜಪ್ಪನಮನೆಕಟ್ಟುವಲ್ಲಿಯೂ ತೆಂಗಿನಮರದ ಉಪಯೋಗವು ಏನಿದ್ದಿತು?
೭. ತೆಂಗಿನ ಮರವು 'ಭೂಲೋಕದ ಕಲ್ಪವೃಕ್ಷ'. ಅದು ಹೇಗೆ?

## ೩೨. ಡಾ. ಶಂಕರರಾಯರು

ಭೀಮಣ್ಣನವರ ನಾಯಿಗೆ ಹುಣ್ಣು ಆಗಿತ್ತು. ಮಲಮು ಹಚ್ಚಿಸಲು ಅವರ ಆಳು ದನಗಳ ಆಸ್ಪತ್ರಿಗೆ ಹೊರಟಿದ್ದನು. ಅವರ ಮಗ ಏಳೆಂಟು ವರ್ಷದ ಶಂಕರನೂ ಆಳಿನೊಡನೆ ನಡೆದನು. ದಾರಿಯಲ್ಲಿ ಹಲವು ಆಸ್ಪತ್ರಿಗಳು ಕಾಣಿಸಿದವು. ಅವೆಲ್ಲ ಮನುಷ್ಯರಿಗಾಗಿ. ಅವನ್ನೆಲ್ಲ ದಾಟಿದ ಬಳಿಕ, ದನಗಳ ಆಸ್ಪತ್ರಿ ಬಂದಿತು. ಅಲ್ಲಿ ಹಲವು ದನಗಳು, ಕುದುರೆಗಳು, ಸಾಕಿದ ನಾಯಿಗಳು, ಬೆಕ್ಕುಗಳು, ಗಿಳಿಗಳು ಇವುಗಳ ಜಾತ್ರೆ ನೆರದಂತೆ ಆಗಿತ್ತು. ಆ ಗದ್ದಲವನ್ನು ಕಂಡು ಶಂಕರನಿಗೆ "ಇದೊಂದೇ ಆಸ್ಪತ್ರಿ ಸಾಲದು, ಪಶು ಪಕ್ಷಿಗಳಿಗೆ ಇನ್ನೂ ಹಲವು ಆಸ್ಪತ್ರಿಗಳು ಬೇಕು", ಎಂದು ಎನಿಸಿತು.

ಅಂದು ಅದೇ ವಿಚಾರದಲ್ಲಿ ಮಲಗಿದನು. ನಿದ್ದೆಯಲ್ಲಿ ಒಂದು ಕನಸನ್ನು ಕಂಡನು. ಅದು ಏನೆಂದರೆ: "ತಾನು ಪಶು ಪಕ್ಷಿಗಳ ಡಾಕ್ಟರನು, ತಮ್ಮ ಊರೊಳಗಿನ ತೋಟದಲ್ಲಿ ತನ್ನ ಆಸ್ಪತ್ರಿ; ಅಲ್ಲಿ ತರತರದ ರೋಗಗಳ ಹಲವು ಪಶು ಪಕ್ಷಿಗಳು ನೆರೆದು ತನ್ನ ದಾರಿಯನ್ನು ಕಾಯುತ್ತಿವೆ."




ಬೆಳಗಿನ ಎಂಟು ಗಂಟೆ. ಡಾ. ಶಂಕರರಾಯರು ತಮ್ಮ ಕುರ್ಚಿಯ ಮೇಲೆ ಕುಳಿತಿರುವರು. ರೋಗಿಗಳಾದ ಪಶು ಪಕ್ಷಿಗಳು ಸರತಿಯಿಂದ ಡಾಕ್ಟರರ ಕಡೆಗೆ ಬರತೊಡಗಿದವು.

ಆಡು:— ಡಾಕ್ಟರರೇ, ನನ್ನ ಕುತ್ತಿಗೆಗೆ ಈ ಎರಡು ಮೊಲೆಗಳು ಸುಮ್ಮನೆ ಜೋತಾಡುತ್ತವೆ. ಇವು ಕೆಲಸಕ್ಕೆ ಬಾರದವೆಂದು ಎಲ್ಲರೂ ಹೀಯಾಳಿಸುವರು. ಇವನ್ನು ಕೊಯ್ಯಿರಿ.

ಡಾಕ್ಟರ:—ತಂಗೀ, ಇವು ಕೊಯ್ಯುವಷ್ಟು ಅಪಾಯಕರವೇನೂ ಅಲ್ಲ. ಇವು ನಿನಗೆ ತೊಂದರೆ ಕೊಟ್ಟಾಗ ಕೊಯ್ಯುವ ವಿಚಾರವನ್ನು ಮಾಡೋಣ.

ಕೋಳಿ:—ರಾಯರೇ, ನನ್ನ ದನಿ ಸರಿಯಾಗಿ ಇಲ್ಲ. ಬೆಳಗಿನಲ್ಲಿ ಇಂಪಾಗಿ ಕೂಗುವೆನೆಂದರೆ, ಗಂಟಲು ಹಿಡಿದಂತಾಗುವದು; ದಯಮಾಡಿ ಔಷಧ ಕೊಡಿರಿ;

ಡಾಕ್ಟರ:-ನೀನು ಬರಿಯ ಹುಳ ಆರಿಸುವದನ್ನು ಕಡಿಮೆಮಾಡು. ಕಾಳುಗಳನ್ನು ಆರಿಸುತ್ತ ಹೋಗು. ದಿನದಿನಕ್ಕೆ ದನಿ ಸರಿಯಾದೀತು.

ಹೆಣ್ಣುನವಿಲು:—ಅಣ್ಣನವರೆ, ನನ್ನ ಗರಿಗಳೆಲ್ಲ ಉದುರಿಹೋಗುತ್ತಿವೆ. ನಮ್ಮ ಗಂಡುಗಳು ಗರಿಗಳಿಂದ ಎಷ್ಟು ಚೆಂದ ಕಾಣಿಸುತ್ತವೆ! ನಮಗೂ ಗರಿಗಳು ನಿಲ್ಲುವಂತೆ ಮಾಡುವಿರಾ?

ಡಾಕ್ಟರ:—ಪಶು ಪಕ್ಷಿಗಳಲ್ಲಿ ಗಂಡುಗಳಿಗೆ ಚೆಂದವನ್ನು ದೇವರೇ ಕೊಟ್ಟಿದ್ದಾನೆ. ನೋಡು-ಗಂಡು ಗುಬ್ಬಿಯ ಕಣ್ಣಿಗೆ ಕಾಡಿಗೆ ಹಚ್ಚಿದೆ.

ಹುಂಜವು ತುರಾಯಿಯಿಂದ ಅಂದವಾಗಿದೆ. ಹೋರಿಗೆ ಇಣಿಯು ಶೋಭೆಯನ್ನು ಕೊಡುತ್ತದೆ. ಗಂಡು ಚಿಗರೆ ಕೋಡುಗಳಿಂದ ಮೆರೆಯುವದು. ಇವುಗಳ ಹೆಣ್ಣುಗಳೆಲ್ಲ ನಿನ್ನಂತೆ ಮರುಗುತ್ತಿರಬೇಕು. ನಾನು ಒಂದು ಕೂದಲೆಣ್ಣೆ ಮಾಡುವೆನು; ಅದನ್ನು ತರಿಸಿಕೊಂಡು ಉಪಯೋಗಿಸು; ಗರಿ ನಿಂತಾವು.

ಕೋಗಿಲೆ:—ಅಣ್ಣಾ, ನನಗೆ ಕಾಗೆರೋಗ! ಮೈಯೆಲ್ಲಾ ಕಂದು ಆಗಿದೆ. ನನ್ನ ಮೈಗೆ ಚೆಂದವಾದ ಬಣ್ಣ ಬರುವಂತೆ ಔಷಧ ಕೊಡಿರಿ.

ಡಾಕ್ಟರ:—ತಂಗೀ, ನಿನಗೆ ಇದ್ದ ಬಣ್ಣವೇ ಇರಲಿ. ಮೊದಲೇ ನಿನ್ನ ದನಿ ಇಂಪಾಗಿದೆ, ಮೇಲೆ ನಿನ್ನ ಬಣ್ಣವೂ ಚೆಂದವಾದರೆ ನೀನೂ ಪಂಜರದಲ್ಲಿ ಕೊಳೆಯಬೇಕಾದೀತು! ನೋಡು ಗಿಳಿಯ ಭವಣೆಯನ್ನು!

ಕಾಗೆ:—ಡಾಕ್ಟರರೇ, ನನ್ನ ದೃಷ್ಟಿ ಸಮನಾಗಿ ಇಲ್ಲ. ಅತ್ತೊಮ್ಮೆ ಇತ್ತೊಮ್ಮೆ ನೋಟ. ದೃಷ್ಟಿ ಸಮವಾಗುವಂತೆ ಮಾಡಿರಿ.

ಡಾಕ್ಟರ:—ನಿನ್ನ ಕಣ್ಣನ್ನು ಪರೀಕ್ಷಿಸಿ, ಯಾವ ನಂಬರಿನ ಕನ್ನಡಕವು ಹತ್ತುವದೆಂಬದನ್ನು ನೋಡಿ, ಅದನ್ನು ತರಿಸಿಕೊಡುವೆನು. ಇನ್ನೆಂಟು ದಿನಕ್ಕೆ ಬಾ. ಹಣ್ಣು ಮೆಣಸಿನಕಾಯಿ ತಿನ್ನುವದನ್ನು ಕಡಿಮೆ ಮಾಡು.

ಕಾಗೆಗೆ ಕನ್ನಡಕವನ್ನು ತರಿಸಿಕೊಡುವೆನೆಂದು ಹೇಳಲು ಗೂಗೆ ತಾನೂ ಮುಂದೆ ಬಂದಿತು.

ಗೂಗೆ:–ಸ್ವಾಮೀ, ಕೆಲವರಿಗೆ 'ಇರುಳುಗಣ್ಣು'ಬೇನೆಯಾದರೆ ನನಗೆ "ಹಗಲುಗಣ್ಣು" ಬೇನೆ. ಒಳ್ಳೆಯ ಕನ್ನಡಕವನ್ನು ತರಿಸಿಕೊಡುವಿರಾ?

ಡಾಕ್ಟರ:—ಎಲೋ ಮರುಳೇ! ನಿನ್ನ ಮೇಲೆ ಸುಮ್ಮಸುಮ್ಮನೆ ಮನುಷ್ಯರು ಹಗೆತನ ಮಾಡುತ್ತಾರೆ. ನಿನ್ನ ಮೋರೆಯನ್ನು ನೋಡಿದರೆ ಅಮಂಗಲವಂತೆ. ನೀನು ಕನ್ನಡಕ ಹಾಕಿಕೊಂಡರೆ ಹಗಲೂ ಹೊರ ಬೀಳುವೆ. ಆಗ ಮನುಷ್ಯರು ನಿನ್ನನ್ನು ಉಳಿಯಗೊಡಲಾರರು. ನೋಡು ಹೇಗೆ ಮಾಡುವೆ?

ಆಸ್ಪತ್ರಿ ಮುಚ್ಚುವ ವೇಳೆ ಆಯಿತು. ಹಲವರು ಇನ್ನೂ ಕಾದುಕೊಂಡೇ ಇದ್ದಾರೆ. ಆನೆಗೆ ತನ್ನ ಕಣ್ಣು ದೊಡ್ಡದಾಗಬೇಕಂತೆ; ಒಂಟೆಗೆ ತನ್ನ ಉದ್ದ ಗೋಣು, ಜೋಲುದುಟಿ, ಬೆನ್ನ ಡುಬರಿ

ಒಂದೂ ಬೇಡವಂತೆ. ಕತ್ತೆಗೆ ತನ್ನ ಸ್ವರಕ್ಕೆ ಇಂಪು ಬರಬೇಕಂತೆ; ಮೊಲಕ್ಕೆ ತನ್ನ ಕಿವಿ ಗಿಡ್ಡಾಗಬೇಕಂತೆ ನೂರಾರು ರೋಗಿಗಳು; ನೂರಾರು ದೂರುಗಳು!

ಶಂಕರನ ಗಡಿಯಾರದ ಐದು ಗಂಟೆಯ ನಿತ್ಯದ 'ಅಲಾರಮ್' ಆಯಿತು. ಶಂಕರನು ಎಚ್ಚತ್ತನು. ಶಂಕರನು ತನ್ನ ಬೆಳಗಿನ ಕೆಲಸಗಳನ್ನು ತೀರಿಸಿಕೊಂಡು, ಕನ್ನಡ ವಾಚನಮಾಲೆಯ ಮೂರನೆಯ ಪುಸ್ತಕವನ್ನು ಓದುತ್ತ ಕುಳಿತನು.

**ಅಭ್ಯಸನಗಳು:—**

೧. ಶಂಕರನು ದನಗಳ ಆಸ್ಪತ್ರಿಯಲ್ಲಿ ಏನೇನು ಕಂಡನು?

೨. ಡಾ. ಶಂಕರರಾಯರು ಕೋಳಿಯ ದನಿ ಸರಿಯಾಗಲಿಕ್ಕೆ ಯಾವ ಔಷಧ ಹೇಳಿದರು?

೩. ಡಾಕ್ಟರರು ಯಾವ ಯಾವ ಪ್ರಾಣಿಗಳಿಗೆ ಏನೇನು ಔಷಧಹೇಳಿದರು?

೪. ದನದ ದವಾಖಾನೆಯ ವರ್ಣನೆ ಬರೆಯಿರಿ

## ೩೩. ಮಳೆ

ಮಳೆ ಬಿದ್ದ ಬಳಿಕ ಎಂದಾದರೂ ನೀವು ಹೊರಗೆ ಹೋಗಿರುವಿರಾ? ಅಲ್ಲಲ್ಲಿ ನೀರು ನಿಲ್ಲುವದು. ನೆಲದ ಮೇಲೆ, ಕಟ್ಟೆಯ ಮೇಲೆ, ಓಣಿಯಲ್ಲಿ, ತಗ್ಗಿನಲ್ಲಿ ನೀರ ಹನಿಗಳು ರಾಶಿ ರಾಶಿಯಾಗಿ ಬೀಳುವವು. ಕೆಲಹೊತ್ತಿನಲ್ಲಿ ಅವು ಮಾಯವಾಗುವವು, ನೆಲವು ಒಣಗುವದು, ಕಲ್ಲು ಹಾಸಿಗೆ ಒಣಗುವದು. ನೀರ ಹನಿಗಳು ಎಲ್ಲಿ ಹೋದವು?

ಆ ನೀರು ಉಗಿಯಾಯಿತು. ನೀರು ಕಾಯ್ದ ಪಾತ್ರೆಯ ಮುಚ್ಚಳ ವನ್ನು ತೆಗೆಯಿರಿ. ಒಮ್ಮೆಲೆ ಹೊಗೆಯಂಥದು ಹೊರಬೀಳುವದು; ಅದೇ ಉಗಿ! ನೀರು ಉಗಿಯಾಯಿತೆಂದರೆ, ನೀರು ಮಾಯವಾಯಿತೆಂದು ತಿಳಿಯಬೇಕು. ಉಗಿಯು ಮೇಲೆ ಹವೆಯಲ್ಲಿ ಹೋಗುವದು. ಪ್ರತಿ ಯೊಂದು ಹೊಳೆ ಹಳ್ಳ, ಕೆರೆ ಭಾವಿಗಳಿಂದ ನೀರು ಉಗಿಯಾಗಿ ಹೊರ ಬೀಳುವದು. ಸಮುದ್ರಗಳಿಂದ ಅಳತೆಯಿಲ್ಲದಷ್ಟು ಉಗಿಮೇಲೇಳುವದು ಸೂರ್ಯನ ಬಿಸಿಲಿಗೆ ನೀರು ಕಾಯ್ದು ಉಗಿ ಹುಟ್ಟುವದು. ಇದರಿಂದ ಹವೆಯಲ್ಲಿ ಉಗಿಯು ತುಂಬಿಕೊಳ್ಳುವದು.



ಉಗಿಯು ಹವೆಯಲ್ಲಿ ಕೂಡಿ, ಮೇಲೆ ಹೋದಂತೆ, ಅದು ತಂಪಾಗುವದು. ಬಳಿಕ ಸಣ್ಣ ಸಣ್ಣ ನೀರ ಹನಿಗಳಾಗುವವು. ಸಾವಿರಾರು ಹನಿಗಳು ಕೂಡುವವು; ಮೋಡಗಳಾಗುವವು. ಗಾಳಿಗಳು ಈ ಮೋಡಗಳನ್ನು ಮುಂದೆ ಒಯ್ಯುವವು. ಮೋಡಗಳಿಗೆ ಹೆಚ್ಚು ತಂಪು ತಗಲುವದು. ಸಣ್ಣ ಸಣ್ಣ ನೀರ ಹನಿಗಳು ಕೂಡಿ ದೊಡ್ಡ ಹನಿಗಳಾಗುವವು. ದೊಡ್ಡ ನೀರ ಹನಿಗಳನ್ನು ಹವೆಯು ಹೊರಲಾರದು. ಅದರಿಂದ ಅವು ಕೆಳಗೆ ಬೀಳುವವು. ಅದೇ ಮಳೆ.

ಒಮ್ಮೆ ಮಳೆ ಹೆಚ್ಚು ಬೀಳುವದು, ಮತ್ತೊಮ್ಮೆ ಕಡಿಮೆ ಯಾಗುವದು. ಮಳೆ ಇಷ್ಟೇ ಆಯಿತೆಂದು ಹೇಗೆ ಗೊತ್ತಾಗುವದು? ಸಮ ನೆಲದ ಮೇಲೆ ಸಮತಳವುಳ್ಳ ಒಂದು ಪಾತ್ರೆಯನ್ನು ಮಳೆ ಬರುವ ಮೊದಲು ಇಡಬೇಕು. ಮಳೆ ನಿಂತ ಮೇಲೆ ಆ ಪಾತ್ರೆಯಲ್ಲಿ ಎಷ್ಟು ಇಂಚು ಎತ್ತರ ನೀರು ನಿಂತಿರುವದೆಂಬದನ್ನು ನೋಡಿರಿ; ಎಂದರೆ ಅಂದು ಅಷ್ಟು ಇಂಚು ಮಳೆಯಾಗಿದೆಯೆಂದು ತಿಳಿಯಬೇಕು. ಈಗ ಮಳೆ ಅಳೆಯುವ ಒಂದು ಯಂತ್ರವನ್ನೇ ಮಾಡಿರುವರು.

ಮುಂಬಯಿ, ಮದ್ರಾಸ ಮೊದಲಾದ ಪಟ್ಟಣಗಳಲ್ಲಿ ಎಷ್ಟು ಇಂಚು ಮಳೆಯಾಗುತ್ತಿದೆಯೆಂಬದನ್ನು ವರ್ತಮಾನ ಪತ್ರಗಳಲ್ಲಿಯೂ



K-III-6a

ಪ್ರಸಿದ್ಧಿಸುವರು. ಇದರಿಂದ ಆ ಆ ಭಾಗಗಳಲ್ಲಿ ಎಷ್ಟು ಇಂಚು ಮಳೆಯಾಗುವದೆಂದು ನಮಗೆ ತಿಳಿಯುವದು.

ಮಕ್ಕಳೇ, ಮಳೆಬಿಲ್ಲನ್ನು ಕಂಡಿರುವಿರಾ? ಮಳೆಬಿಲ್ಲು ಹೇಗೆ ಮೂಡುವದು? ನಿಮಗೆ ಗೊತ್ತಿದೆಯೇ? ಮಳೆಬಿಲ್ಲಿನಲ್ಲಿ ಎಷ್ಟು ಬಣ್ಣಗಳಿರುವವೆಂಬದನ್ನು ಬಲ್ಲಿರಾ? ಸ್ಪಷ್ಟವಾಗಿ ಮೂಡಿದ ಮಳೆಬಿಲ್ಲನ್ನು ನೀವು ಚೆನ್ನಾಗಿ ನಿರೀಕ್ಷಿಸಿರಿ. ಅದಕ್ಕೆ ಏಳು ಬಣ್ಣಗಳು ಇರುವವು. ಒಮ್ಮೊಮ್ಮೆ ಸಾಲೆಯ ಹುಡುಗರು ಈ ಬಿಲ್ಲಿನ ಬಣ್ಣಗಳನ್ನು ಎಣಿಸಿ ವಾದಹಾಕುವರು, ಕೆಲವರು ಅದಕ್ಕೆ ಐದುಬಣ್ಣಗಳಿರುವವೆಂದೂ ಮತ್ತೆ ಕೆಲವರು ನಾಲ್ಕು ಬಣ್ಣಗಳಿರುವವೆಂದೂ ಅನ್ನುವರು. ಮಳೆಬಿಲ್ಲು ಸ್ಪಷ್ಟವಾಗಿ ಮೂಡಿರಬೇಕು; ಆಗ ಏಳೂ ಬಣ್ಣಗಳೂ ಒಡೆದು ಕಾಣುವವು. ಅಂಥ ಸಮಯದಲ್ಲಿ ಆ ಬಣ್ಣಗಳನ್ನು ಎಣಿಸಿರಿ. ಕೆಂಪು, ಕಿತ್ತಳಿ, ಅರಿಸಿನ, ಹಸರು, ನೀಲ, ಶ್ಯಾಮ ಮತ್ತು ಊದಿ ಈ ಬಣ್ಣಗಳನ್ನು ನೀವು ನೋಡಿರುವಿರಿ. ಬಿಲ್ಲಿನ ಹೊರ ಅಂಚಿಗೆ ಕೆಂಪು ಬಣ್ಣವೂ, ಒಳ ಅಂಚಿಗೆ ಊದಿ ಬಣ್ಣವೂ ಕಾಣಿಸುವವು.

ಮಳೆ ಬರುವಾಗ ಈ ಬಿಲ್ಲು ಕಾಣುವದು. ಸೂರ್ಯನ ಕಡೆಗೆ ಬೆನ್ನು ಮಾಡಿಕೊಂಡು ನಿಂತು ಮುಂದೆ ಮಳೆ ಬೀಳುತ್ತಿರುವದನ್ನು ನೋಡಿರಿ. ಅದು ಒಂದು ಅಂಚಿನಿಂದ ಮತ್ತೊಂದು ಅಂಚಿಗೆ ಮಣಿದ ಒಂದು ದೊಡ್ಡ ಬಿಲ್ಲಿನಂತೆ ಕಾಣುವದು. ಅದರ ಡುಬರಿಯು ಮೇಲೆ ಆಕಾಶದಲ್ಲಿ ಎತ್ತರವಾಗಿಯೂ ಅದರ ಅಂಚುಗಳು ಉತ್ತರ-ದಕ್ಷಿಣ ದಿಕ್ಕುಗಳ ತುದಿ ಮುಟ್ಟಿದಂತೆಯೂ ಕಾಣುವವು. ಮಳೆ ಬರುವಾಗ ಬಿಸಿಲು ಬಿದ್ದಿರಬೇಕು; ಎಂದರೆ ಈ ಬಿಲ್ಲು ಕಾಣುವದು. ಮಳೆ ಇಲ್ಲದಾಗಲೂ ಮಳೆಯ ಮೋಡಗಳ ಮೇಲೆ ಸೂರ್ಯನ ಕಿರಣಗಳು ಬಿದ್ದರೆ ಈ ಬಿಲ್ಲು ಕಾಣಿಸುವದು. ಇದರಿಂದ ಇದಕ್ಕೆ ಮಳೆಬಿಲ್ಲು ಎಂದು ಹೇಳುವರು; ಕಾಮನಬಿಲ್ಲು ಎಂದೂ ಕರೆಯುವರು. ನೀವು ಬಾಯಿಯೊಳಗೆ ನೀರು ಹಾಕಿಕೊಂಡು ಸೂರ್ಯನ ಕಡೆಗೆ ಬೆನ್ನು ಮಾಡಿ ಫುರ್ ಎಂದು ಊದಿರಿ; ಆ ತುಂತುರ ಹನಿಗಳಲ್ಲಿ ಕಾಮನ ಬಿಲ್ಲನ್ನು ಕಾಣುವಿರಿ.

ಸಾಮಾನ್ಯವಾಗಿ ಕಾಮನಬಿಲ್ಲು ಮುಂಜಾವಿನಲ್ಲಿ ಇಲ್ಲವೆ ಸಂಜೆಯ ಸಮಯದಲ್ಲಿ ಕಾಣುವದು. ಸೂರ್ಯನು ಆಕಾಶದ ಕೆಳಭಾಗದಲ್ಲಿ

ಇದ್ದಾಗ, ಬಿಲ್ಲು ದೊಡ್ಡದಾಗಿ ಕಾಣುವದು. ಆಗ ಅದರ ಅಂದವೋ ಹೆಚ್ಚು! ಸೂರ್ಯನು ಮೇಲೆ ಇದ್ದಂತೆ ಬಿಲ್ಲು ಕಿರಿದಾಗುವದು. ಇದನ್ನೆಲ್ಲ ನೀವು ನೋಡಿರುವಿರಾ? ಮುಂದಿನ ಸಾರೆ ಕಾಮನಬಿಲ್ಲು ಮೂಡಿದಾಗ ಕಣ್ತುಂಬ ನೋಡಿರಿ.

**ಅಭ್ಯಾಸಗಳು:—**

೧ ನೀರು ಹೇಗೆ ಮಾಯವಾಗುವದು?
೨ ಮಳೆ ಹೇಗೆ ಬೀಳುವದು?
೩ ಮಳೆಯನ್ನು ಹೇಗೆ ಅಳೆಯುವರು?
೪ ಮಳೆಬಿಲ್ಲು ಅಂದರೇನು?
೫ ಕಾಮನಬಿಲ್ಲಿಗೆ ಬಣ್ಣಗಳೆಷ್ಟು? ಅವುಗಳ ಹೆಸರು ಹೇಳಿರಿ.
೬ ಕಾಮನಬಿಲು ಯಾವಾಗ ಕಾಣುವದು? ಯಾವ ದಿಕ್ಕಿನಲ್ಲಿ ಕಾಣುವದು?
೭ ಕಾಮನಬಿಲ್ಲು ಯಾವಾಗ ದೊಡ್ಡದಾಗಿ ಕಾಣುವದು?
೮ ಕೆಳಗಿನ ಶಬ್ದಗಳ ವಿರುದ್ಧಾರ್ಥ ಹೇಳುವ ಶಬ್ದಗಳನ್ನು ಬರೆಯಿರಿ:
ಕೆಳಭಾಗ, ಕಿರಿದು, ಅಪಮಾನ, ಉಪಕಾರ, ಬುದ್ಧಿಗೇಡಿ

## ೩೪. ಕಾಲಗಳೂ ತಿಂಗಳುಗಳೂ

ಅಂದು ಕಾರಹುಣ್ಣಿವೆ. ಊರಲ್ಲಿ ಒಕ್ಕಲಿಗರು ತಮ್ಮ ತಮ್ಮ ಎತ್ತುಗಳ ಮೈಯನ್ನು ತೊಳೆದು ಅವುಗಳ ಕೋಡುಗಳಿಗೆ ಹುರಮಂಜು ಬಳೆದು ಸಿಂಗರಿಸುತ್ತಿರುವರು. ಭರಮನು ಮನೆಯ ಅಂಗಳದಲ್ಲಿ ತನ್ನ ಎತ್ತುಗಳಿಗೆ ಜೂಲು ಹಾಕುತ್ತಿದ್ದನು. ಅವನ ತಮ್ಮನಾದ ಬಸವನೂ ತನ್ನ ಚಿಕ್ಕ ಹೋರಿಯ ಮೈ ತೊಳೆಯುತ್ತಿದ್ದನು. ಅಷ್ಟರಲ್ಲಿ ಮುಗಿಲೆಲ್ಲ ಕರಿಯ ಮೋಡಗಳಿಂದ ಮುಚ್ಚಿಕೊಂಡಿತು. ಬಿಸಿಲ ಮೋರೆಯೇ ಇಲ್ಲದಂತಾಯಿತು. ಬಸವನಿಗೆ ಸೋಜಿಗವಾಯಿತು.

ಬಸವ:— ಅಣ್ಣಾ, ಇದೇನು ಇಷ್ಟು ತೀವ್ರ ಸಂಜೆಯಾಯಿತೇ? ನೋಡು! ಈಗಲೇ ಇಷ್ಟೇಕೆ ಕತ್ತಲೆ?

ಭರಮ:— ಇದು ಜ್ಯೇಷ್ಠಮಾಸ. ಮುಗಿಲ ತುಂಬ ಮೋಡಗಳು ಕವಿದಿವೆ. ಈಗ ಮಳೆಗಾಲವು ಆರಂಭವಾಯಿತು. ಈಗಿನ ಮಳೆಗೆ 'ಮುಂಗಾರ ಮಳೆ' ಅನ್ನುವರು. ಈ ಮಳೆಗೆ ಒಕ್ಕಲಿಗರು ಕೆಂಜೋಳ, ನೆಲಗಡಲೆ, ಎಳ್ಳು, ಔಡಲಗಳನ್ನು ಬಿತ್ತುವರು. ಈಗ ಮೃಗ ಮಳೆ

ಕೊಡುವದು. ಮುಂದಿನದು ಆಷಾಢಮಾಸ. ಆಗ ಪಶ್ಚಿಮದ ಗಾಳಿಯು ಕಸುವಿನಿಂದ ಬೀಸುವದು. ಜಡಿಮಳೆ ಹಿಡಿಯುವದು. ಬಳಿಕ ಶ್ರಾವಣ ಮಾಸ. ಆಗಂತೂ ಜಡಿಮಳೆ ತೆರಪಿಲ್ಲದೆ ಸುರಿಯುವದು. ಹೊಳೆ ಹಳ್ಳಗಳು ತುಂಬಿ ಹರಿಯುವವು. ಕೆರೆ ಬಾವಿಗಳು ತುಂಬಿ ತುಳುಕುವವು. ಹೊಲಗಳೆಲ್ಲ ಹಸರು ಮುರಿಯುತ್ತಿರುವವು. ನಾಗರ ಪಂಚಮಿಯ ಹಬ್ಬ ಬರುವದು; ಜನರು ತಂಬಿಟ್ಟು, ಕಡುಬುಗಳನ್ನು ಮಾಡಿಕೊಂಡು ತಿನ್ನುವರು; ಜೋಕಾಲಿ ಆಡುವರು.

ಬಸವ:-ಅಣ್ಣಾ,ಗಣಪತಿಯನ್ನು,ಯಾವ ತಿಂಗಳಲ್ಲಿ ಕೂಡ್ರಿಸುವರು?

ಭರಮ:— ಶ್ರಾವಣವಾದ ಬಳಿಕ ಭಾದ್ರುಪದವು ಬರುವದು. ಆಗ ಗಣೇಶಚವತಿಯ ಹಬ್ಬ! ಜನರು ಮೋದಕ, ಕಡುಬುಗಳನ್ನು ಮಾಡಿಕೊಂಡು ಉಣ್ಣುವರು. ಹುಡುಗರು ಪಟಾಕ್ಷಿ, ಮದ್ದುಗಳನ್ನು ಹಾರಿಸುವರು. ಆಗ ಕಡೆಯ ಮಳೆಗಳು ಆರಂಭವಾಗುವವು. ಅವಕ್ಕೆ 'ಹಿಂಗಾರ ಮಳೆ' ಎಂದು ಅನ್ನುವರು. ಆಗ ಒಕ್ಕಲಿಗರು ಹತ್ತಿಯನ್ನು ಬಿತ್ತಲಿಕ್ಕೆ ಹತ್ತುವರು. ಹೀಗೆ ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರುಪದ ಈ ನಾಲ್ಕು ತಿಂಗಳುಗಳಲ್ಲಿ ಹೆಚ್ಚಾಗಿ ಮಳೆಯು ಆಗುವದು; ಮಳೆ ಆಗುವ ಈ ಕಾಲವು ಮಳೆಗಾಲವೆನಿಸುವದು

ಬಸವ:—ಮಳೆಗಾಲವಾದ ಬಳಿಕ ಯಾವ ಕಾಲವು ಬರುವದು? ಯಾವ ತಿಂಗಳುಗಳೂ ಹಬ್ಬಗಳೂ ಬರುವವು?

ಭರಮ:—ಮಳೆಗಾಲದ ತರುವಾಯ ಚಳಿಗಾಲವು ಬರುವದು. ಆ ಕಾಲದಲ್ಲಿ ಗಿಡಗಳ ಎಲೆಗಳು ಉದುರುವವು. ಚಳಿಗಾಲದ ಮೊದಲನೆಯ ತಿಂಗಳು ಅಶ್ವಿನಮಾಸ. ಆಗ ದಸರೆಯ ಹಬ್ಬವು ಬರುವದು. ಜನರು ಒಬ್ಬರಿಗೊಬ್ಬರು ಬನ್ನಿಯನ್ನು ಕೊಡುವರು. ಅಶ್ವಿನದ ಹುಣ್ಣಿವೆಯೇ ಸೀಗೆಯ ಹುಣ್ಣಿವೆ. ಆಗ ಒಕ್ಕಲಿಗರು ಮುಂಗಾರಿಯ ಬೆಳೆಯ ಪೂಜೆಮಾಡಿ ಹುಗ್ಗಿ ಹೋಳಿಗೆಗಳ ಊಟವನ್ನು ಮಾಡುವರು. ಬಳಿಕ, ಗೋದಿ, ಕಡಲೆ, ಬಿಳಿಜೋಳಗಳನ್ನು ಬಿತ್ತುವರು. ಮುಂದೆ ಕಾರ್ತಿಕಮಾಸವು ಬರುವದು. ಆ ತಿಂಗಳಲ್ಲಿ ದೀವಳಿಗೆಯ ಹಬ್ಬ. ಆ ಹಬ್ಬದಲ್ಲಿ ದೀಪೋತ್ಸವವನ್ನು ಮಾಡುವರು. ಪಾಯಸ, ಕರಚಿಕಾಯಿ, ಉಂಡಿ, ಚಕ್ಕುಲಿಗಳನ್ನು ಮಾಡಿಕೊಂಡು ಉಣ್ಣುವರು.

ಆ ತಿಂಗಳಲ್ಲಿ ಗುಡಿಗಳಲ್ಲಿ ಕಾರ್ತಿಕವನ್ನು ಹಚ್ಚುವರು. ದೀವಳಿಗೆಯಾದ ಮೇಲೆ ಗೌರೀಹುಣ್ಣಿವೆ ಬರುವದು. ಹುಡಿಗೆಯರು ಸಡಗರದಿಂದ ಗೌರೀಪೂಜೆ ಮಾಡುವರು. ಆಗ ಒಕ್ಕಲಿಗರು ಜೋಳದಪೈರನ್ನು ಕೊಯ್ಯುವರು. ಕಾರ್ತಿಕವಾದ ಮೇಲೆ ಮಾರ್ಗಶೀರ್ಷಮಾಸ ಅದರಲ್ಲಿ ಎಳ್ಳಮಾವಾಸ್ಯೆ ಬರುವದು. ರೈತರು ಹಿಂಗಾರಿ ಬೆಳೆಯ ಪೂಜೆ ಮಾಡುವರು ಎಳ್ಳಹೋಳಿಗೆ ಮಾಡಿಕೊಂಡು ಊಟ ಮಾಡುವರು. ಮುಂದಿನದು ಪುಷ್ಯಮಾಸ. ಆಗ ಸಂಕ್ರಮಣ ಹಬ್ಬ ಬರುವದು. ಜನರು ಎರೆದುಕೊಂಡು, ಎಳ್ಳುಬೆಲ್ಲವನ್ನು ಒಬ್ಬರಿಗೊಬ್ಬರು ಕೊಡುವರು. ಒಕ್ಕಲಿಗರು ಜೋಳ ಒಕ್ಕುವರು. ಹೀಗೆ ಆಶ್ವಿನ, ಕಾರ್ತಿಕ, ಮಾರ್ಗಶಿರ್ಷ, ಪುಷ್ಯ ಈ ನಾಲ್ಕು ತಿಂಗಳು ಚಳಿ ಬೀಳುವದರಿಂದ ಚಳಿಗಾಲವೆನಿಸುವದು.

ಬಸವ:— ಚಳಿಗಾಲವಾದ ಮೇಲೆ ಯಾವ ಕಾಲ ಬರುವದು? ಅದರಲ್ಲಿ ಯಾವ ಯಾವ ತಿಂಗಳುಗಳೂ, ಹಬ್ಬಗಳೂ ಬರುವವು?

ಭರಮ:— ಚಳಿಗಾಲವಾದ ಮೇಲೆ ಬೇಸಗೆ ಬರುವದು. ಅದರಲ್ಲಿ ಮೊದಲು ಬರುವದು ಮಾಘಮಾಸ. ಆಗ ಎರೆ ಹೊಲಗಳಲ್ಲಿ ಬಿಳಿ ಜೋಳದ ಬೆಳಸಿ ಇರುವವು. ಹತ್ತಿ ಒಡೆಯಲಿಕ್ಕೆ ಆರಂಭವಾಗುವದು. ಭಾರತ ಹುಣ್ಣಿವೆ ಬರುವದು. ಇದಾದ ಮೇಲೆ ಮಹಾಶಿವರಾತ್ರಿ ಬರುವದು; ಆ ದಿನ ಜನರು ಶಿವನಿಗೆ ಅಭಿಷೇಕ ಮಾಡುವರು. ಶಿವ ಕೀರ್ತನೆ, ಶಿವಪುರಾಣಗಳನ್ನು ಕೇಳುವರು. ಮುಂದಿನದು ಫಾಲ್ಗುಣ ಮಾಸ. ಅದರಲ್ಲಿ ಹೋಳಿಹುಣ್ಣಿವೆ ಮುಖ್ಯ. ಅದು ಕಾಮನ ಹಬ್ಬವು. ಆಗ ಗೋದಿ, ಕಡಲೆಗಳನ್ನು ಒಕ್ಕುವರು. ಮುಂದಿನದು ಚೈತ್ರಮಾಸವು. ಚೈತ್ರಮಾಸದ ಮೊದಲನೆಯ ದಿನವೇ ಯುಗಾದಿಯು. ಇದು ಹಿಂದು ಜನರ ಹೊಸ ವರ್ಷದ ಮೊದಲನೆಯ ದಿನವು. ಅಂದು ಜನರು ಬೇವು ಬೆಲ್ಲವನ್ನು ತಿನ್ನುವರು. ಮುಂದೆ ದವನದಹುಣ್ಣಿವೆ ಬರುವದು. ಅಂದು ಹೆಣ್ಣುಮಕ್ಕಳು ಅಕ್ಕಮಹಾದೇವಿಯ ಹಬ್ಬವನ್ನು ಮಾಡುವರು. ಮುಂದೆ ವೈಶಾಖದಲ್ಲಿ ಬಿಸಿಲು ಹೆಚ್ಚುವದು. ಆಗ ಒಕ್ಕಲಿಗರು ರಂಟೆ ಹೊಡೆಯುವದು, ಹರಗುವದು, ಮುಂತಾದವುಗಳನ್ನು ಮಾಡಿ, ಹೊಲಗಳನ್ನು ಹಸನಮಾಡುವರು. ಹೀಗೆ ಮಾಘ, ಫಾಲ್ಗುಣ, ಚೈತ್ರ, ವೈಶಾಖ ಈ ನಾಲ್ಕೂ ತಿಂಗಳು ಬೇಸಗೆಯ ಕಾಲವೆನಿಸುವದು.

ಬೇಸಗೆಯ ತರುವಾಯ ಮತ್ತೆ ಮಳೆಗಾಲವು ಬರುವದು. ವರ್ಷಕ್ಕೆ ಹನ್ನೆರಡು ತಿಂಗಳುಗಳು; ಎಂದರೆ ಮುನ್ನೂರು ಅರವತ್ತೈದು ದಿವಸಗಳಾಗುವವು. ನಾಲ್ಕು ತಿಂಗಳುಗಳಿಗೆ ಒಂದು ಕಾಲವು. ತಮ್ಮಾ, ಈಗ ಬಹಳ ಹೊತ್ತಾಯಿತು. ನಡೆ, ಮುಂದಿನ ಕೆಲಸ ಮಾಡೋಣ.

ಅಭ್ಯಸನಗಳು:—

೧. ವರ್ಷದಲ್ಲಿ ತಿಂಗಳುಗಳು ಎಷ್ಟು? ಕಾಲುಗಳು ಎಷ್ಟು?

೨. ಮಳೆಗಾಲದಲ್ಲಿ ಯಾವ ತಿಂಗಳುಗಳು ಬರುವವು?

೩. ಚಳಿಗಾಲದಲ್ಲಿ ಯಾವ ಹಬ್ಬಗಳು ಬರುವವು?

೪. ಬೇಸಗೆಯಲ್ಲಿ ಒಕ್ಕಲಿಗರು ಹೊಲದಲ್ಲಿ ಯಾವ ಕೆಲಸಗಳನ್ನು ಮಾಡುವರು?

೫. ತಿಂಗಳುಗಳ ಹೆಸರುಗಳನ್ನು ಚೈತ್ರದಿಂದ ಕ್ರಮವಾಗಿ ಹೊಂದಿಸಿ ಬರೆಯಿರಿ.

## ೩೫. ಮನೆಗಳು

ಮಕ್ಕಳೇ, ಮುಂದಿನ ಪುಟದಲ್ಲಿಯ ಚಿತ್ರದ ಎಡಮೂಲೆಯಲ್ಲಿ ಕಾಣಿಸುವ ಜನರನ್ನು ನೋಡಿರಿ. ಸುಮಾರು ಮೂವತ್ತು ಸಾವಿರ ವರುಷಗಳಹಿಂದೆ, ಇಂತಹ ಜನರು ಅಡವಿಯಲ್ಲಿ ಇರುತ್ತಿದ್ದರು. ಅವರಿಗೆ ಮನೆಮಾರುಗಳು ಇದ್ದಿಲ್ಲ. ಮೈಮೇಲೆ ಬಟ್ಟೆಬರೆಗಳೂ ಇರಲಿಲ್ಲ. ಗಿಡದ ತೊಗಟೆ ಇಲ್ಲವೆ ಚರ್ಮದ ಹೊದಿಕೆಯಿಂದ ಮೈಮುಚ್ಚಿಕೊಳ್ಳುತ್ತಿದ್ದರು. ಕಾಡಪಶುಗಳ ಬೇಟೆಯಾಡಿ, ಅವುಗಳ ಮಾಂಸವನ್ನು ತಿನ್ನುತ್ತಿದ್ದರು. ಅವರು ಕಲ್ಲಿನ ಆಯುಧಗಳನ್ನೂ, ಕಲ್ಲಿನಪಾತ್ರೆಗಳನ್ನೂ ಉಪಯೋಗಿಸುತ್ತಿದ್ದರು. ಗುಡ್ಡದ ಓರೆಗಳಲ್ಲಿಯೂ, ಗವಿಗಳಲ್ಲಿಯೂ, ಗಿಡದ ಹೊದರುಗಳಲ್ಲಿಯೂ ವಾಸಿಸುತ್ತಿದ್ದರು. ಈ ಕಾರಣಗಳ ಮೂಲಕ ಅವರನ್ನು ಶಿಲಾಯುಗದ ಜನರೆಂದು ಕರೆಯುತ್ತಿದ್ದರು. ಗವಿಮನುಷ್ಯರೆಂದೂ ಅನ್ನುತ್ತಿದ್ದರು. ಗವಿಗಳೇ ಅವರ ಮನೆಗಳಾಗಿದ್ದವು.

ಹೀಗೆ ಕಾಡುಸ್ಥಿತಿಯಲ್ಲಿದ್ದ ಜನರು ಕಾಲವು ಕಳೆದಂತೆ ಎಷ್ಟೋ ಹೊಸ ಹೊಸ ಸಂಗತಿಗಳನ್ನು ಕಲಿತರು. ಚಳಿಯಲ್ಲಿ ಬಯಲೊಳಗೆ ಇರುತ್ತಿದ್ದ ಆ ಅಡವಿಯ ಜನರು ಮುಂದೆ ಎಷ್ಟೋ ವರುಷಗಳು ಗತಿಸಿದ ಮೇಲೆ ಹುಲ್ಲಿನ ಗುಡಿಸಲುಗಳನ್ನೂ, ಮಣ್ಣಿನ ಮನೆಗಳನ್ನೂ ಕಟ್ಟಿಕೊಳ್ಳಲಾರಂಭಿಸಿದರು. ಹೀಗೆ ಅವರು ಮನೆಗಳಿಗೆ ಹುಲ್ಲು, ಕಲ್ಲು, ಮಣ್ಣು, ಕಟ್ಟಿಗೆಗಳ ಉಪಯೋಗವನ್ನು ಮಾಡಿಕೊಂಡರು.



ಬರಬರುತ್ತ ತಾಮ್ರ, ಕಬ್ಬಿಣ, ಉಕ್ಕು ಮೊದಲಾದ ಲೋಹಗಳ ಶೋಧಗಳಾದವು. ಕಬ್ಬಿಣ, ಉಕ್ಕುಗಳನ್ನು ಉಪಯೋಗಿಸಿ ಜನರು ಮನೆಗಳನ್ನು ಕಟ್ಟಿಕೊಳ್ಳಹತ್ತಿದರು. ಹಳ್ಳಿಗಳೂ ಪಟ್ಟಣಗಳೂ ಉಂಟಾದವು. ಹಳ್ಳಿಗಳಲ್ಲಿ ಕಲ್ಲು, ಮಣ್ಣು, ಕಟ್ಟಿಗೆಗಳನ್ನು ಉಪಯೋಗಿಸಿದ ಸಣ್ಣ ಸಣ್ಣ ಮನೆಗಳೇ ಹೆಚ್ಚು. ದೊಡ್ಡ ದೊಡ್ಡ ಊರುಗಳಲ್ಲಿ ಈಚೆಗೆ ಸಿರಿವಂತರು ಕಬ್ಬಿಣ ಉಕ್ಕುಗಳನ್ನು ಹೆಚ್ಚಾಗಿ ಉಪಯೋಗಿಸಿ, ದೊಡ್ಡ ದೊಡ್ಡ ಕಟ್ಟಡಗಳನ್ನು ಕಟ್ಟಿಸಿದರು. ಇಟ್ಟಂಗಿ, ಗಚ್ಚು, ಸಿಮೆಂಟುಗಳನ್ನು ಸೇರಿಸಿ ಮನೆಗಳ ಗೋಡೆಗಳನ್ನೂ, ತೊಲೆ, ಕಂಬಗಳನ್ನೂ ಕಟ್ಟಲಾರಂಭಿಸಿದರು. ಕಿಡಿಕೆಯ ಬಾಗಿಲುಗಳಿಗೆ ಕಾಜನ್ನು ಕೂಡ್ರಿಸಿದರು; ಮನೆಗಳ ಮೇಲೆ ತರತರದ ಹಂಚುಗಳನ್ನು ಹೊದಿಸಿದರು.

ಮಕ್ಕಳೇ, ತರತರದ ಅಂದವಾದ ಮನೆಗಳನ್ನೂ ಏಳೆಂಟು ಅಂತಸ್ತುಗಳುಳ್ಳ ಎತ್ತರವಾದ ಮನೆಗಳನ್ನೂ ದೊಡ್ಡ ಊರುಗಳಲ್ಲಿ ಈಗ ನೀವು ನೋಡುವಿರಿ. ಅಮೇರಿಕೆಯ 'ನ್ಯೂಯಾರ್ಕ್' ಪಟ್ಟಣದಲ್ಲಿ ಮುಗಿಲನ್ನು ಮುಟ್ಟಿರುವವೋ ಏನೋ ಎನ್ನುವಷ್ಟು ಎತ್ತರವಾಗಿವೆ; ಬಹಳ ಅಂತಸ್ತುಗಳುಳ್ಳ ಮನೆಗಳಿವೆ. ಜನರು ಸುಧಾರಿಸುತ್ತ ನಡೆದಂತೆ, ಅವರು ವಾಸಿಸುವ ಮನೆಗಳೂ ಸುಧಾರಣೆ ಹೊಂದಿರುವವು.

ಕೆಲವು ದೇಶಗಳಲ್ಲಿ ಕೆಲವು ಜನರ ವಿಚಿತ್ರವಾದ ಮನೆಗಳುಂಟು. ತಮಗೆ ಅನುಕೂಲವಾಗುವ ಮನೆಗಳನ್ನು ಕಟ್ಟಿಕೊಂಡು ಜನರು ಅಲ್ಲಿ




ವಾಸಿಸುವರು ಹಿಮದಿಂದ ಮುಚ್ಚಿದ ತೀರ ಉತ್ತರ ದಿಕ್ಕಿನಲ್ಲಿ ವಾಸಿಸುವ “ಎಸ್ಕಿಮೋ” ಜನರು ಬರ್ಫದ ಬಂಡೆಗಳನ್ನು ಹೊಂದಿಸಿ ಮನೆಗಳನ್ನು ಮಾಡಿಕೊಳ್ಳುವರು. ಅಲ್ಲಿ ಚಳಿ ಬಹಳ. ಬರ್ಫದ ಬಂಡೆಗಳು ಕರಗುವದಿಲ್ಲ. ಚಳಿಗಾಳಿ ಒಳಗೆ ಬರಬಾರದೆಂದು ಮನೆಯ ಬಾಗಿಲವನ್ನು ಸಣ್ಣದಾಗಿ ಮಾಡುವರು. ಹೊಟ್ಟೆ ಹೊಸೆಯುತ್ತ ಅವರು ಮನೆಯೊಳಗೆ ಹೋಗಬೇಕಾಗುವದು. ಮನೆಯನ್ನು ಬೆಚ್ಚಗಿಡಲು, ಯಾವಾಗಲೂ ದೀಪವನ್ನು ಇಡುವರು.

ಸಮುದ್ರದ ದಂಡೆಯ ಪ್ರದೇಶದಲ್ಲಿ ಮೀನಗಾರರನ್ನು ನೀವು ನೋಡಿರುವಿರಾ? ಅವರು ನೀರಿನಲ್ಲಿಯೇ ಹೆಚ್ಚು ಹೊತ್ತು ಕಳೆಯುವರು. ಒಮ್ಮೊಮ್ಮೆ ಎಷ್ಟೋ ದಿನಗಳ ವರೆಗೆ ಅವರು ದಂಡೆಗೆ ಬರುವದೇ ಇಲ್ಲ. ಅಂಥವರು ತಮ್ಮ ಚಿಕ್ಕ ನಾವಿನಲ್ಲಿಯೇ ಗುಡಿಸಲು ಹಾಕಿ, ಮನೆ ಮಾಡಿಕೊಳ್ಳುವರು. ಚೀನ ದೇಶದಲ್ಲಿ ಇಂತಹ ಮೀನಗಾರರು ಬಹಳ. ಅವರ ಮನೆಗಳನ್ನು “ತೇಲಾಡುವ ಮನೆ” ಗಳೆಂದು ಕರೆಯುವರು.

ನಮ್ಮ ದೇಶದ ಪೂರ್ವಕ್ಕೆ ‘ಜಪಾನ’ ದೇಶವಿದೆ. ಅಲ್ಲಿ ಮೇಲಿಂದ ಮೇಲೆ ಭೂಕಂಪಗಳಾಗುವವು. ಇದರಿಂದ ಮನೆಗಳು ಕುಸಿದು ಬೀಳುವವು. ಇಂತಹ ಪ್ರಸಂಗಗಳಲ್ಲಿ ಮನೆಮಾರುಗಳನ್ನು ತೀವ್ರ ಕಿತ್ತುಕೊಂಡು ಮತ್ತೊಂದು ಸ್ಥಳಕ್ಕೆ ಹೋಗಬೇಕಾಗುವದು. ಅದರಿಂದ ಅವರು ಹಗುರಾದ ಮನೆಗಳನ್ನು ಕಟ್ಟುವರು ಮನೆಯ ಸುತ್ತಲೂ

ಕಟ್ಟಿಗೆಯ ಗೋಡೆಗಳನ್ನು ಹಾಕುವರು; ಒಳಗೆ ರಟ್ಟಿನ ಗೋಡೆಗಳನ್ನು ಹಾಕಿ. ಕೋಣೆಗಳನ್ನು ಮಾಡುವರು. ಜಪಾನೀ ಜನರ ಹಗುರಾದ ಮನೆಗಳು "ರಟ್ಟಿನ ಮನೆ"ಗಳೆಂದು ಹೆಸರಾಗಿವೆ

ಲಮಾಣಿಗಳು, ಗೊಲ್ಲರು, ಕೊರವರು ಮೊದಲಾದ ಕೆಲ ಹಿಂದುಳಿದ ಜನರು ಒಂದು ಕಡೆ ವಾಸಿಸುವದಿಲ್ಲ; ಅವರು ಅತ್ತಿತ್ತ ಅಲೆಯುವರು. ಅದರಿಂದ ಅವರು ಗುಡಾರಗಳನ್ನು ಹೊಡೆದುಕೊಂಡು ವಾಸಿಸುವರು. ಅವೇ ಅವರ ಮನೆಗಳು. ಹುಲ್ಲಿನ ಚಾಪೆಗಳಿಂದ ಮಾಡಿದ ಚಿಕ್ಕ ಮನೆಗಳನ್ನು ಹಾಕಿಕೊಂಡೂ ವಾಸಿಸುವರು; ಮತ್ತು ಅವನ್ನು ಬಿಚ್ಚಿ ಸುತ್ತಿಕೊಂಡು ಊರೂರು ಅಲೆಯುವರು.

ಕೆಲವರು ಅಡವಿಗಳಲ್ಲಿ ಇಲ್ಲವೆ ಗದ್ದೆಗಳಲ್ಲಿ ವಾಸಿಸುತ್ತಿದ್ದರು. ನಾಲ್ಕು ಗಳಗಳನ್ನು ನಿಲ್ಲಿಸಿ, ಒಂದು ಚೌಕು ಮಂಚಿಗೆಯನ್ನು ಮಾಡಿ ಅದರ ಮೇಲೆ ಗುಡಿಸಲು ಹಾಕುತ್ತಿದ್ದರು. ಮೇಲೆ ಹೋಗಲು ನಿಚ್ಚಣಿಕೆಯನ್ನು ಉಪಯೋಗಿಸುತ್ತಿದ್ದರು. ಮಲೆನಾಡಿನಲ್ಲಿ ಕೆಲವರು ಇಂಥ ಮನೆಗಳನ್ನು ಈಗಲೂ ಮಾಡಿಕೊಳ್ಳುವರು. ಕ್ರೂರ ಪ್ರಾಣಿಗಳ ಉಪದ್ರವ ತಪ್ಪಿಸಿಕೊಳ್ಳುವದಕ್ಕಾಗಿ, ಕೆಲವು ಕಡೆಗಳಲ್ಲಿ ಜನರು ಗಿಡಗಳ ಟೊಂಗೆಗಳ ಮೇಲೆಯೂ ಗುಡಿಸಲು ಹಾಕುತ್ತಿದ್ದರು. ಅವೇ ಅವರ ಮನೆಗಳು.

ಮಕ್ಕಳೇ, ಇವೆಲ್ಲ ನಿಮಗೆ ವಿಚಿತ್ರವಾದ ಮನೆಗಳೆಂದು ತೋರುವವು. ಆದರೆ ಆ ಆ ಜನರು ತಮ್ಮ ಅನುಕೂಲತೆಗಾಗಿ, ಅಂಥ ಮನೆಗಳನ್ನು ಮಾಡಿಕೊಂಡಿದ್ದರು.

**ಅಭ್ಯಾಸನಗಳು:—**

೧ ಶಿಲಾಯುಗದ ಜನರೆಂದು ಯಾರಿಗೆ ಅನ್ನುತ್ತಿದ್ದರು?

೨ ಅವರು ಎಲ್ಲಿ ವಾಸಿಸುತ್ತಿದ್ದರು?

೩ ಬಳಿಕ ಜನರು ಏನೇನು ಉಪಯೋಗಿಸಿ, ಮನೆಗಳನ್ನು ಕಟ್ಟಿಕೊಂಡರು?

೪ ಜನರು ಸುಧಾರಿಸುತ್ತ ನಡೆದಂತೆ ಮನೆ ಕಟ್ಟುವದರಲ್ಲಿ ಏನೇನು ಸುಧಾರಣೆಗಳನ್ನು ಮಾಡಿಕೊಂಡರು?

೫ ಎಸ್ಕಿಮೋ ಜನರ ಮನೆಗಳೆಂಥವ?

೬ ತೇಲಾಡುವ ಮನೆಗಳೆಂದರೇನು?

೭ ರಟ್ಟಿನ ಮನೆಗಳು ಯಾವ ದೇಶದಲ್ಲಿವೆ?

೮ ಹುಲ್ಲಿನ ಚಾಪೆಗಳಿಂದ ಮನೆಗಳನ್ನು ಯಾರು ಮಾಡಿಕೊಳ್ಳುವರು?

೯ ಮಲೆನಾಡಿನಲ್ಲಿ ಜನರು ತಮ್ಮ ಗದ್ದೆಗಳಲ್ಲಿ ಎಂಥ ಮನೆ ಮಾಡಿಕೊಳ್ಳುವರು?

೧೦ ನಿಮ್ಮ ಶಾಲೆಯ ಕಟ್ಟಡದ ವರ್ಣನೆ ಬರೆಯಿರಿ.

# ೩೬. ನಿಜಲಿಂಗ ಶತಕ

ಮಂದಮತಿ ನಿಂದಿಸಲು ತಾಳಿಕೊಂಡವ ಜಾಣ ।
ಒಂದೆ ಮನದಲಿ ಧರ್ಮವನು ಮಾಡುವವ ಜಾಣ ।
ಬಂದ ಬಹು ಚಿಂತೆಯಲಿ ಧೈರ್ಯಗೊಂಬವ ಜಾಣ
ಹೀನರಿಂ ಕಲಹಂಗಳು ॥
ಸಂದಿಸಲು ಶಾಂತಗುಣವನು ತಾಳಿದವ ಜಾಣ ।
ಇಂದು ನಾಳಿನ್ನದೆಯೆ ಕಲಿವವನು ಕಡುಜಾಣ ।
ತಂದೆಯೇ ಲೋಕಗಳ
ನಿಜಲಿಂಗ ಭವಭಂಗ ಶರಣಜನವರದ ದೇವಾ ॥ ೧ ॥

ಮನೆಯು ಕದನವನು ಪರರೊಳು ಪೇಳದವ ಜಾಣ ।
ತನುಜಾನುಜರೊಳು ಕೋಪವ ಹಿಡಿಯುದವ ಜಾಣ ।
ಧನವಿರಲು ಧರ್ಮವ ಗಳಿಸಿಕೊಂಬವ ಜಾಣ ।
ದುರ್ಜನರು ಹಳಿಯುತಿರಲು ॥
ಮನದೊಳಗೆ ಹಿಡಿದ ವ್ರತಗಳನು ಬಿಡದವ ಜಾಣ ।
ಘನಮಹಿಮ ನಿಮ್ಮ ಧ್ಯಾನವನು ಮಾಡುತಲಿರ್ಪ ।
ಮನುಜ ಸಲೆ ಜಾಣನೈ
ನಿಜಲಿಂಗ ಭವಭಂಗ ಶರಣ ಜನವರದ ದೇವಾ ॥ ೨ ॥

ಕೊಟ್ಟುಬಳಿಕಿನ್ನು ಮನದೊಳಗೆ ಕುದಿವವ ಮೂರ್ಖ ।
ಕೆಟ್ಟು ಪಿಸುಣಗ ನೆಂಟರನು ಸೇರುವವ ಮೂರ್ಖ ।
ನಿಷ್ಠೆವಂತರ ನೋಡಿ ನಿಂದಿಸುವನತಿಮೂರ್ಖ
ದಯೆಯೊಳಾಡುವವೊಡೆಯನ ॥
ಬಿಟ್ಟಾಡಿ ದೂರಿಕೊಂಬವನೀಗ ಕಡು ಮೂರ್ಖ ।
ಸೃಷ್ಟಿಗೊಡೆಯುನನು ಮನದೊಳಗೆ ತಾ ಭಜಿಸದೆ ।
ಭ್ರಷ್ಟನಾದವ ಮೂರ್ಖ
ನಿಜಲಿಂಗ ಭವಭಂಗ ಶರಣಜನವರದ ದೇವಾ ॥ ೩ ॥

**ಅಭ್ಯಸನಗಳು:—**

೧. ಜಾಣರಲ್ಲಿ ಎಂಥ ಗುಣಗಳಿರಬೇಕು?
೨. ೩ನೆಯ ಪದ್ಯದಲ್ಲಿ ಎಂಥವನಿಗೆ 'ಮೂರ್ಖ' ಎಂದು ಕರೆಯಲಾಗಿದೆ?
೩. ಕೆಳಗಿನ ಶಬ್ದಗಳ ಅರ್ಥ ಹೇಳಿರಿ:
ನಿಷ್ಠೆ, ಸೃಷ್ಟಿ, ಕದನ, ತನುಜ, ದುರ್ಜನ, ವ್ರತ

# ೩೭. ರಾಶಿ



ಭೂಮಿತಾಯಿಯು ಎಲ್ಲರಿಗಿಂತ ಬಹಳ ದೊಡ್ಡವಳು. ಆಕೆಗೆ ಮಕ್ಕಳು ಬಹಳ. ಅವರನ್ನೆಲ್ಲ ಆಕೆ ಬಲು ಸಂತೋಷದಿಂದ ಜೋಪಾನ ಮಾಡುವಳು. ಅವರಿಗೆ ಬಗೆ ಬಗೆಯ ಕಾಳು ಕೊಡುವಳು. ಸವಿಯಾದ ಹಣ್ಣು ಕೊಡುವಳು. ತರತರದ ಗಡ್ಡೆ ಬೇರುಗಳನ್ನು ಕೊಡುವಳು. ಆಕೆಯು ನಮ್ಮಂಥ ಒಕ್ಕಲುಮಕ್ಕಳಿಗೆ ತೀರ ಹತ್ತಿರದವಳು. ಒಕ್ಕಲಿಗರಾದ ನಾವು ಭೂಮಿ ತಾಯಿಯ ಚೊಚ್ಚಲ ಮಕ್ಕಳು.

ನಾವು ಭೂಮಿ ತಾಯಿಯ ಸೇವೆಯನ್ನು ಚೆನ್ನಾಗಿ ಮಾಡುವೆವು. ಭೂಮಿ ತಾಯಿಯ ಸೇವೆಯೆಂದರೇನು ಬಲ್ಲಿರಾ? ರೆಂಟೆಕುಂಟೆಗಳಿಂದ ಮಣ್ಣನ್ನು ಮಿದುವು ಮಾಡುವೆವು. ಗೊಬ್ಬರ ಹಾಕಿ ಅದರ ಕಸುವನ್ನು ಹೆಚ್ಚಿಸುವೆವು. ಮೇಲೆ ಕಸವು ಬೆಳೆಯದಂತೆ ಹಸನಾಗಿ ಇಟ್ಟು ಕೊಳ್ಳುವೆವು. ಹೀಗೆ ನಾವು ಸೇವೆ ಮಾಡಿದ ಬಳಿಕ ಆಕಾಶವೆಂಬ ತಂದೆ ಕೃಪೆ ಮಾಡಿ ಮಳೆ ಸುರಿಸಬೇಕು. ಆಗ ನಾವು 'ಹಿಡಿ ಬಿತ್ತಿ ಪಡಿ ಬೆಳೆಕೊಳ್ಳು'ವೆವು. ಭೂಮಿ ತಾಯಿಯ ಕೈ ದೊಡ್ಡದು. ತನ್ನ ಚೊಚ್ಚಲ ಮಕ್ಕಳಾದ ನಮಗೆ ಬಹಳ ಧಾನ್ಯಗಳನ್ನು ಕೊಡುವಳು.

ನಮ್ಮ ಬಯಲು ನಾಡಿನಲ್ಲಿ ಜೋಳದ ಬೆಳೆ ಮುಖ್ಯ ಅದರ ನಿಲವು ನಿಂತಾಗ ಹೆಗಲ ಮೇಲೆ ಭಲ್ಲೆಯನ್ನು ಇಟ್ಟುಕೊಂಡು ಸಾಲಾಗಿ ನಿಂತ ಸಿಪಾಯಿಗಳಂತೆ ಕಾಣಿಸುವದು. ಮಾಗಿದ ಕೂಡಲೆ ಅದನ್ನು ಕಿತ್ತು ಹಾಕುವರು. ಕೆಲವರು ಕೊಯ್ದು ಹಾಕುವರು. ಬಳಿಕ ಸಿವುಡು ಕಟ್ಟುವರು. ಗೂಡು ಹಾಕುವರು. ಬಳಿಕ ಅದನ್ನೆಲ್ಲ ಕಣಕ್ಕೆ ಒಯ್ಯುವರು. ಅಲ್ಲಿ ಸಾಲಾಗಿ ಹೆಣ್ಣುಮಕ್ಕಳು ಕುಳಿತು ತೆನೆ ಮುರಿದು ಕಣದಲ್ಲಿ ಹಾಕುವರು; ಸೊಗಸಾಗಿ ಹಾಡುತ್ತ ಕೆಲಸ ಮಾಡುವರು. ಹೊಲದವನು ಸಂಜೆಗೆ ಅವರಿಗೆ ಕೂಲಿಯ ತೆನೆ ಅಲ್ಲದೆ ಉಡಿ ತೆನೆಯೆಂದು ಕೆಲವನ್ನು ಹಾಕುವನು. ಆಗ ಆ ಹೆಣ್ಣುಮಕ್ಕಳು ಹಿಗ್ಗುವರು. ಅದರಿಂದ ಅವರಿಗೆ ದಣಿವು ಹಗುರಾದಂತೆ ಎನಿಸುವದು.

ಕಣದಲ್ಲಿ ಇದ್ದ ತೆನೆಗಳನ್ನು ತುಳಿಸುವದಕ್ಕೆ ಎತ್ತುಗಳನ್ನು ಸಾಲಾಗಿ ಕಟ್ಟುವರು. ಅದಕ್ಕೆ 'ಹಂತಿ' ಅನ್ನುತ್ತಾರೆ. ಹಂತಿ ಕಟ್ಟುವ ಕೆಲಸವು ಸಂಜೆಗೆ ಆರಂಭವಾಗಿ ಮುಂಜಾವಿನ ವರೆಗೆ ಸಾಗುವದು ಒಮ್ಮೊಮ್ಮೆ ತಾಸೆರಡು ತಾಸು ಹೊತ್ತು ಏರುತ್ತದೆ. ಹಂತಿ ತುಳಿಸುವದಕ್ಕೆ ನೆರೆಹೊರೆಯ ಹೊಲದವರು ತಮ್ಮ ತಮ್ಮ ಎತ್ತುಗಳನ್ನು ಕೊಡುವರು. ಹಂತಿ ಹೊಡೆಯುವದಕ್ಕೆ ತಾವೂ ಬರುವರು. ಹಂತಿ ಹೊಡೆಯುವಾಗ ಹಂತಿಯ ಹಾಡುಗಳನ್ನು ಹಾಡುವರು. ಕೆಲಸ ಮಾಡುವವರು ಆಗಾಗ ಕಂಕಿಯನ್ನು ತೆಗೆಯುವರು. ಕಂಕಿಯು ಇಲ್ಲದಂತಾಗಲು ಹಂತಿ ತುಳಿಸುವ ಕೆಲಸವು ಮುಗಿಯುವದು. ಬಳಿಕ ಕಣದಲ್ಲಿಯ ಕಾಳನ್ನು ಹರಹು ಸವು ಮಾಡುವರು. ಅದಕ್ಕೆ ಮದ ಮಲಗಿತೆನ್ನುವರು. ಮೆಟ್ಟು ನಾಲಿಗೆ ಹಚ್ಚಿ ಮಲಗಿದ ಮದವನ್ನು ತೂರ ಹತ್ತುವರು. ಗಾಳಿಗೆ ಜೊಳ್ಳು ಹಾರಿ ಹೋಗಿ, ತೂರಿದ ಸ್ಥಳದಲ್ಲಿ ಕಾಳು ಬೀಳುವದು. ಅಲ್ಲಿಯೇ ಕುಳಿತ ಒಬ್ಬನು ಬರಲಿನಿಂದ ಕಾಳ ಮೇಲಿನ ಸಳ್ಳು ಹೊಡೆಯುವನು. ಅದರಿಂದ ಕಾಳು ಹಸನಾಗುವವು. ಆ ಕಾಳನ್ನು ಮೇಟಿಯ ಸುತ್ತಲೂ ಎಳೆದು ರಾಶಿ ಮಾಡುವರು.

ರಾಶಿ ಆದ ದಿವಸ ಒಕ್ಕಲಿಗರು ಸಂಜೆಯ ಮುಂದೆ ಅಂಬಲಿ, ಕಿಚಡಿ, ಹೋಳಿಗೆ, ಹುಗ್ಗಿ ಮೊದಲಾದ ಪದಾರ್ಥಗಳನ್ನು ಮಾಡಿ ಕೊಂಡು ಹೊಲಕ್ಕೆ ತರುವರು. ರಾಶಿಯ ಪೂಜೆ ಮಾಡುವರು. ಎಡೆ ಹಿಡಿಯುವರು. ಆ ದೀಪ, ಆ ಧೂಪ, ಆ ಎಡೆ, ಆ ರಾಶಿ ಇದನ್ನೆಲ್ಲ ನೋಡಿದರೆ ಹೊಲದ ಲಕ್ಷ್ಮಿಯು ಎದ್ದು ಬಂದಂತೆ ಕಾಣಿಸುವದು.

ಆಳುಮಕ್ಕಳು, ಹಂತಿ ಹೊಡೆಯ ಬಂದ ನೆರೆಹೊರೆಯ ರೈತರು, ಬಳಗದವರು, ಗೆಳೆಯರು ಕೂಡಿಕೊಂಡು ಊಟ ಮಾಡುವರು. ಶಾಂತವಾದ ಅಡವಿ. ರಾತ್ರಿಯ ತಂಪು ಹೊತ್ತು. ಹೋಳಿಗೆ ಹುಗ್ಗಿಗಳ ಊಟ. ಮೇಲೆ ಅಂಬಲಿ ಕಿಚಡಿ ಉಣ್ಣುವರು; ಇದರಿಂದ ಹೊಟ್ಟೆ ತಣ್ಣಗಾಗುವದು. ತಾವಾಗಿ ಕಣ್ಣು ಮುಚ್ಚತೊಡಗುವವು. ಕಣ್ಣು ತೆರೆದರೆ ಮುತ್ತಿನ ರಾಶಿಯಂತಿರುವ ಜೋಳದ ರಾಶಿ ಕಾಣಿಸುವದು. ಅದೇನು ಸುಖ! ನೋಡಿದರೇ ತಿಳಿಯುವದು.

ಬೆಳಗು ಮುಂಜಾನೆ ಆ ಕಾಳನ್ನು ಚೀಲಗಳಲ್ಲಿ ತುಂಬಿ ಬಂಡಿಯ ಮೇಲೆ ಹೇರಿಕೊಂಡು ಎತ್ತು ಹೂಡಿ ಮನೆಗೆ ತರುವರು. ಸುಗ್ಗಿಯಲ್ಲಿ ಎತ್ತುಗಳ ಮೈಯಲ್ಲಿ ಕಸುವು ಹೆಚ್ಚು ಬಂದಿರುವ ಕಾರಣ, ಹೆಚ್ಚು ಚೀಲ ಹೇರಿದರೂ ಅವು ಜಿಗಿಯುತ್ತ ಬಂಡಿಯನ್ನು ಎಳೆಯುವವು. ತುಂಬಿದ ಬಂಡಿಯನ್ನು ಊದಿಸುತ್ತ ಬಾರಿಸುತ್ತ ಊರಲ್ಲಿ ಮೆರೆಸಿ ಮನೆಗೆ ತಂದು ಇಳಿಸುವರು.

ಜೋಳ, ಗೋದಿ ಮೊದಲಾದ ಕಾಳುಗಳ ರಾಶಿಯು ಇಷ್ಟು ಸಡಗರದಿಂದ ಮುಗಿಯುತ್ತದೆ. ಉಳಿದ ಅಕ್ಕಡಿಕಾಳುಗಳ ರಾಶಿಗೆ ಇಷ್ಟೊಂದು ಸಡಗರವಿಲ್ಲ.

**ಅಭ್ಯಾಸನಗಳು:—**

೧ ಎಲ್ಲರಿಗಿಂತ ದೊಡ್ಡ ತಾಯಿ ಯಾರು? ಯಾಕೆ?

೨ ಕಣ, ಮೇಟಿ, ತೆನೆಗಣಿಕೆ, ಉಡಿತೆನೆ, ಕಂಕಿ ಈ ಶಬ್ದಗಳನ್ನು ಹಾಕಿ ಒಂದೊಂದು ಮಾತು ಹೇಳಿರಿ.

೩ ಏಕೆ?

ಅ) ಒಕ್ಕಲಿಗರು ಭೂಮಿ ತಾಯಿಯ ಜೋಚ್ಚಲ ಮಕ್ಕಳು.
ಆ) ಬರಲಿನಿಂದ ಕಾಳ ಮೇಲಿನ ಸಳ್ಳು ಹೊಡೆಯುವರು.
ಇ) ಹೆಚ್ಚು ಚೀಲ ಹೇರಿದರೂ ಎತ್ತು ಜಿಗಿಯುತ್ತ ಬಂಡಿಯನ್ನು ಎಳೆಯುವವು.

## ೩೮. ಡೆಪ್ಯೂಟಿ ಚೆನ್ನಬಸವಪ್ಪನವರು



ಸುಮಾರು ನೂರಿಪ್ಪತ್ತು ವರ್ಷಗಳ ಹಿಂದೆ ನಮ್ಮ ಈ ಕನ್ನಡ ನಾಡಿನ ಬಹು ಭಾಗವು ಪುಣೆಯ ಪೇಶ್ವೆಯರ ಆಡಳಿತೆಗೆ ಒಳಪಟ್ಟಿತ್ತು. ಪೇಶ್ವೆಯರಭಾಷೆ ಮರಾಠಿಯಿದ್ದುದರಿಂದ ಇಲ್ಲಿಯ ಎಲ್ಲವ್ಯವಹಾರವೂ ಮರಾಠಿಯಲ್ಲಿಯೇ ನಡೆಯುತ್ತಿತ್ತು. ಇದರಿಂದ ಕನ್ನಡದ ಬೆಳವಣಿಗೆ, ಗೌರವ ಕಡಿಮೆಯಾದವು. ಪೇಶ್ವೆಯರ ರಾಜ್ಯವು ಹೋದ ಬಳಿಕ ಬಂದ ಇಂಗ್ಲಿಷರು ಕೂಡ ಪೇಶ್ವೆಯರ ಆಡಳಿತೆಯ ಕ್ರಮವನ್ನೇ ಅನುಸರಿಸಿದರು. ಆದದರಿಂದ ಕನ್ನಡನಾಡಿನಲ್ಲಿ ಕನ್ನಡ ನುಡಿಗೆ ಮನ್ನಣೆ ಇದ್ದಿದ್ದಿಲ್ಲ. ಇಂತಹ ಕಾಲದಲ್ಲಿ ಕನ್ನಡ ನುಡಿಯ ಏಳಿಗೆಗಾಗಿ ಹೋರಾಡಿದವರಲ್ಲಿ ಡೆಪ್ಯೂಟಿ ಚೆನ್ನಬಸವಪ್ಪನವರು ಮೊದಲಿಗರು.

ಚೆನ್ನಬಸವಪ್ಪನು ೧೮೫೫ನೆಯ ಇಸವಿಯಲ್ಲಿ ಹುಟ್ಟಿದನು. ಇವನ ತಂದೆ ಬಸವಲಿಂಗಪ್ಪ. ತಾಯಿ ತಿಪ್ಪಮ್ಮ. ಇವರು ಧಾರವಾಡದವರು. ಚೆನ್ನಬಸವಪ್ಪನು ಆರು ವರ್ಷದವನಿರುವಾಗಲೇ, ಅವನ ತಂದೆಯವರು ತೀರಿಕೊಂಡರು. ಮನೆತನದ ಭಾರವು ತಿಪ್ಪಮ್ಮನವರ ಮೇಲೆಯೇ ಬಿದ್ದಿತು.

ತಿಪ್ಪಮ್ಮನವರು ಮಗನನ್ನು ಸಾಲೆಗೆ ಹಾಕಿದರು. ಚೆನ್ನಬಸವನ ಕಿಡಿಗೇಡಿ ಸ್ವಭಾವಕ್ಕೆ ಗುರು ಶಿವರುದ್ರಯ್ಯನವರು ಬೇಸತ್ತು ಒಮ್ಮೆ ಚೆನ್ನಾಗಿ ಬಡಿದು ಬುದ್ಧಿ ಹೇಳಿದರು. ಅಂದಿನಿಂದ ಚೆನ್ನಬಸವನು ಮನಸ್ಸುಗೊಟ್ಟು ಕನ್ನಡ, ಮರಾಠಿ ಓದು-ಬರೆಹಗಳನ್ನೂ, ಗಣಿತವನ್ನೂ ಕಲಿತನು.

ಬಳಿಕ ಇಂಗ್ಲಿಷವನ್ನು ಕಲಿಯಲು ಚೆನ್ನಬಸವಪ್ಪನು ಪುಣೆಗೆ ಹೋಗಲು ನಿಶ್ಚಯಿಸಿ, ಕಾಲು ನಡಿಗೆಯಿಂದ ಅಜ್ಜನ ಊರಾದ ಗೋಕಾವಿಗೆ ಹೋದನು. ಇವನ ಸಾಹಸವನ್ನು ಕಂಡು ಇವನ ತಂದೆಯ ಗೆಳೆಯನೊಬ್ಬನು ಐವತ್ತು ರೂಪಾಯಿಗಳನ್ನು ಕೊಟ್ಟನು. ಆ ಹಣವನ್ನು ತೆಗೆದುಕೊಂಡು ಚೆನ್ನಬಸವಪ್ಪನು ಪುಣೆಗೆ ಹೋದನು.

ಅಲ್ಲಿ ಅವನ ಗುರುತಿನವರು ಯಾರೂ ಇದ್ದಿಲ್ಲ. ಹತ್ತಿರ ಸಾಕಷ್ಟು ಹಣವೂ ಉಳಿದಿರಲಿಲ್ಲ. ಅದರಿಂದ ಅವನಿಗೆ ತುಸು ತೊಂದರೆ ಎನಿಸಿತು. ಆ ಮೇಲೆ ತಾಯಿಯನ್ನು ಅಲ್ಲಿಗೇ ಕರೆಯಿಸಿಕೊಂಡನು. ಇಂಗ್ಲಿಷ ಶಾಲೆಯ ಅಭ್ಯಾಸವನ್ನು ಮುಗಿಸಿ, ಇಂಜನಿಯರಿಂಗ ಕಾಲೇಜವನ್ನು ಸೇರಿದನು. ಗಣಿತವು ಅವನ ಪ್ರೀತಿಯ ವಿಷಯವಾಗಿತ್ತು. ತೀವ್ರವೇ ಅವನು ಗುರುಗಳ ಪ್ರೀತಿಯನ್ನು ಸಂಪಾದಿಸಿದನು; ಕೊನೆಯ ಪರೀಕ್ಷೆಯನ್ನು ಮುಗಿಸಿದನು.

ಕಷ್ಟದಿಂದ ವಿದ್ಯಾಭ್ಯಾಸ ಮುಗಿಸಿಕೊಂಡು ಚೆನ್ನಬಸವಪ್ಪನವರು ಮೊದಲು ಪೋಷ್ಟ ಖಾತೆಯಲ್ಲಿ ನೌಕರಿ ಹಿಡಿದರು; ತುಸು ದಿನಗಳ ಲ್ಲಿಯೇ ವಿದ್ಯಾಖಾತೆಯಲ್ಲಿ ಸೇರಿ ಬೆಳಗಾವಿಯ ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾದರು. ಇದೇ ಸಂಸ್ಥೆಯು ಮುಂದೆ ಬೆಳೆದು ಟ್ರೇನಿಂಗ ಕಾಲೇಜು ಆಗಿ, ಅದು ಧಾರವಾಡಕ್ಕೆ ಬಂದಿತು. ಇವರು ಈ ಕಾಲೇಜಿನ ಪ್ರಿನ್ಸಿಪಾಲರಾದರು. ಒಳ್ಳೆಯ ಆಸ್ಥೆಯಿಂದ ಕೆಲಸ ಮಾಡಿದರು. ಆಗ ಸರಕಾರದವರು 'ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್' ಎಂಬ ಜಾಗೆಯನ್ನು ನಿರ್ಮಿಸಿ, ಅದಕ್ಕೆ ಇವರನ್ನು ನಿಯಮಿಸಿದರು. ಈ ಅಧಿಕಾರ ಸ್ಥಾನದಲ್ಲಿ ಅತ್ಯುತ್ತಮವಾಗಿ ಕೆಲಸ ಮಾಡಿ, ಬಹಳ ಕೀರ್ತಿಯನ್ನು ಗಳಿಸಿದರು. ಇದರಿಂದ ಅವರು ಡೆಪ್ಯೂಟಿ ಚೆನ್ನಬಸವಪ್ಪ ನವರೆಂದು ಹೆಸರಾದರು.

ಸಾಲೆಗಳ ಮೇಲ್ವಿಚಾರಣೆಯ ಸಮಯದಲ್ಲಿ ಶಿಕ್ಷಕರಿಗೆ ಯೋಗ್ಯ ಮಾರ್ಗದರ್ಶಕರಾಗಿ ನಡೆಯುತ್ತಿದ್ದರು. ಶಿಕ್ಷಕರು ಮರಾಠಿಯಲ್ಲಿ ಅಂಕೆ-ಮಗ್ಗಿ ಕಲಿಸುವದನ್ನು ನೋಡಿ ಕನ್ನಡದಲ್ಲಿ ಕಲಿಸಲಿಕ್ಕೆ ಕಟ್ಟಪ್ಪಣೆ

ಮಾಡಿದರು. ಸೋಮಾರಿ ಶಿಕ್ಷಕರನ್ನು ಕಂಡರೆ, ಅವರಿಗೆ ಬಲು ಬೇಸರ; ಆದರೆ ಅವರ ತಪ್ಪುಗಳನ್ನು ಕ್ಷಮಿಸುತ್ತಿದ್ದರು. ಉತ್ತಮ ಶಿಕ್ಷಕರಲ್ಲಿ ಅವರಿಗೆ ತುಂಬ ಪ್ರೇಮ.

ಆಗಿನ ಕಾಲದಲ್ಲಿ ಕನ್ನಡ ಶಾಲೆಗಳು ಕಡಿಮೆ; ಜನರ ಭಾಷೆ ಮರಾಠಿ ಬೆರೆತ ಹರಕ ಮುರಕ ಕನ್ನಡ; ವಿದ್ಯೆ ಕಲಿತವರು ತಾವು ಕನ್ನಡಿಗರೆಂದು ಹೇಳುವದಕ್ಕೆ ನಾಚಿಕೆಯಾಗುತ್ತಿತ್ತು; ಯಾಕೆಂದರೆ ಸರಕಾರಿ ಭಾಷೆ ಮರಾಠಿ. ಅದದರಿಂದ ವಿದ್ಯೆ ಕಲಿತವರಿಗೆ ಮರಾಠಿ ಯನ್ನಾಡುವದು ತಮಗೆ ಭೂಷಣವೆಂಬ ಕಲ್ಪನೆಯುಳ್ಳವರಾಗಿದ್ದರು. ವರ್ತಕರೂ ಲೆಕ್ಕಪತ್ರಗಳನ್ನು ಮರಾಠಿಯಲ್ಲಿಯೇ ಇಡುತ್ತಿದ್ದರು. ಇದನ್ನೆಲ್ಲ ಕಂಡು ಚೆನ್ನಬಸವಪ್ಪನವರಿಗೆ ಬಲು ನೋವಾಯಿತು.

ಆಗ ದಕ್ಷಿಣ ಭಾಗದ ವಿದ್ಯಾಧಿಕಾರಿಗಳಾಗಿದ್ದ 'ರಸೆಲ್'ಸಾಹೇಬ ರಿಗೆ ಕನ್ನಡ ಭಾಷೆಯ ಹೀನಸ್ಥಿತಿಯನ್ನು ಚೆನ್ನಬಸವಪ್ಪನವರು ವಿವರಿಸಿ ಹೇಳಿದರು. ಕನ್ನಡ ಪ್ರದೇಶದಲ್ಲಿ ಕನ್ನಡಕ್ಕೆ ಮನ್ನಣೆ ಇರಬೇಕು ಎಂಬದನ್ನು 'ರಸೆಲ್'ಸಾಹೇಬರೂ ಒಪ್ಪಿದರು. ಸರಕಾರಕ್ಕೆ ಅದರಂತೆ ತಿಳಿಸಿದರು. 'ರಸೆಲ್'ಸಾಹೇಬರ ಸಹಾಯದಿಂದ ಕನ್ನಡ ಪ್ರಚಾರ ಕಾರ್ಯವನ್ನು ಚೆನ್ನಬಸವಪ್ಪನವರು ನಡೆಸಿದರು.

ಊರೂರಿಗೆ ಹೋಗಿ ಸಭೆ ಮಾಡಿ, ಕನ್ನಡವನ್ನು ಆಡಿರಿ, ಕನ್ನಡ ವನ್ನು ಕಲಿಯಿರಿ, ಕನ್ನಡದಲ್ಲಿ ಬರೆಯಿರಿ, ಕನ್ನಡದಲ್ಲಿ ರುಜುಹಾಕಿರಿ, ಎಂದು ಜನರಿಗೆ ಬೋಧಿಸಿದರು; ಅದರಿಂದ ಕನ್ನಡಸಾಲೆಗಳುಹೆಚ್ಚಿದವು. ಮೊದಲು ಈ ಭಾಗದ ಪ್ರತಿಯೊಂದು ಜಿಲ್ಲೆಯಲ್ಲಿ ಕನ್ನಡ ಸಾಲೆಗಳು ೪೦–೫೦ ಮಾತ್ರ ಇದ್ದವು. ಮುಂದೆ ಇವರ ಪ್ರಯತ್ನದಿಂದ ಧಾರವಾಡ ಜಿಲ್ಲೆಯಲ್ಲಿ೩೪೧, ಬೆಳಗಾವಿಜಿಲ್ಲೆಯಲ್ಲಿ೧೭೭, ವಿಜಾಪುರ ಜಿಲ್ಲೆಯಲ್ಲಿ ೧೫೦ ಕನ್ನಡ ಸಾಲೆಗಳು ಆದವು.

ಮುಖ್ಯವಾಗಿ, ಶಿಕ್ಷಕರು ಶುದ್ಧ ಕನ್ನಡವನ್ನೇ ಉಪಯೋಗಿಸ ಬೇಕೆಂದೂ, ಸಾಲೆಯ ಲೆಕ್ಕಪತ್ರಗಳನ್ನೆಲ್ಲ ಕನ್ನಡದಲ್ಲಿಯೇ ಬರೆಯ ಬೇಕೆಂದೂ ಕಟ್ಟಪ್ಪಣೆ ಮಾಡಿದರು. ಆಗಿನ ಕಾಲದಲ್ಲಿ ಕನ್ನಡ

ಶಾಲೋಪಯೋಗಿ ಪುಸ್ತಕಗಳು ಕಡಿಮೆ ಇದ್ದವು. ಆದದರಿಂದ ಚೆನ್ನಬಸವಪ್ಪನವರು ಎರಡು ಗಣಿತ ಪುಸ್ತಕಗಳನ್ನು ಬರೆದರು; ಮತ್ತು ಲೇಖಕರಿಗೆ ತಕ್ಕ ಪ್ರೋತ್ಸಾಹವನ್ನು ನೀಡಿದರು. ತುರಮರಿ ಗಂಗಾಧರಯ್ಯನವರು, ವೆಂಕಟೇಶ ರಂಗೋ ಕಟ್ಟಿಯವರು, ಚುರಮರಿ ಶೇಷಗಿರಿ ಆಚಾರ್ಯರು ಮತ್ತು ಕಿತ್ತೂರ ಶಾಂತವೀರಪ್ಪನವರು ಮೊದಲಾದವರು ಇವರ ಉತ್ತೇಜನದಿಂದ ಕನ್ನಡದಲ್ಲಿ ಉತ್ತಮ ಪುಸ್ತಕಗಳನ್ನು ಬರೆದರು.

ಚೆನ್ನಬಸವಪ್ಪನವರು ವಿದ್ಯಾಧಿಕಾರಿಗಳಾಗಿದ್ದುದರಿಂದ, ವಿದ್ಯಾ ಪ್ರಸಾರ ಕಾರ್ಯದೊಡನೆ ಕನ್ನಡದ ಏಳಿಗೆಯ ಕೆಲಸವನ್ನು ಮಾಡಿದರು. ತಾಯಿನುಡಿಯ ಏಳಿಗೆಗಾಗಿ ಮೊದಲು ಪ್ರಯತ್ನಮಾಡಿದ ಡೆಪ್ಯೂಟಿ ಚೆನ್ನಬಸವಪ್ಪನವರು ಕನ್ನಡಿಗರೆಲ್ಲರಿಗೂ ಪೂಜ್ಯರಾಗಿದ್ದಾರೆ.

**ಅಭ್ಯಾಸನಗಳು:—**

೧ ಡೆಪ್ಯೂಟಿ ಚೆನ್ನಬಸವಪ್ಪನವರಿಂದು ಯಾಕೆ ಹೆಸರಾದರು?
೨ ಅವರು ಯಾವ ವಿಷಯದಲ್ಲಿ ಪುಸ್ತಕಗಳನ್ನು ಬರೆದರು?
೩. ಕನ್ನಡ ನುಡಿಯ ವಿಷಯವಾಗಿ ಅವರು ಮಾಡಿದ ಸುಧಾರಣೆಗಳು ಯಾವವು?
೪ ಅವರಲ್ಲಿ ಕಂಡು ಬಂದ ಒಳ್ಳೇ ಗುಣಗಳು ಯಾವವು?

## ೩೯. ನಾಡಹಬ್ಬ

ನಮ್ಮ ನಾಡು ಕನ್ನಡ ನಾಡು. ಕನ್ನಡ ನಾಡಿನಲ್ಲಿ ಬಹಳ ಹೆಸರಾಗಿ ಹೋದ ಅರಸು ಮನೆತನವೆಂದರೆ ವಿಜಯನಗರದ ಅರಸರದು. ಅವರ ಕುಲದೇವತೆ ಭುವನೇಶ್ವರಿ. 'ಭುವನೇಶ್ವರಿ' ಕನ್ನಡ ನಾಡದೇವಿ. ಆಕೆಯನ್ನು ಪೂಜಿಸುವ ಹಬ್ಬವೇ ನಾಡಹಬ್ಬ. ಎಲ್ಲ ಹಬ್ಬಗಳಲ್ಲಿ ನಾಡಹಬ್ಬವು ಹೆಚ್ಚಿನದು; ಯಾಕೆಂದರೆ ಇದು ನಮ್ಮ ನಾಡದೇವಿಯ ಹಬ್ಬ; ಎಲ್ಲ ಕನ್ನಡಿಗರ ಹಬ್ಬ.

ವಿಜಯನಗರದ ಅರಸರು ಈ ಹಬ್ಬವನ್ನು ಒಳ್ಳೆಯ ಸಡಗರದಿಂದ ಆಚರಿಸುತ್ತಿದ್ದರು. ಆಶ್ವಿನ ಶುದ್ಧ ಪ್ರತಿಪದೆಯ ದಿವಸ ಊದಿಸುತ್ತ

ಬಾರಿಸುತ್ತ ಭುವನೇಶ್ವರಿಯನ್ನು ರಾಜಧಾನಿಯಲ್ಲಿ ಮೆರೆಯಿಸಿ ಕೊಂಡು ಬಂದು ಓಲಗದಲ್ಲಿ ಕೂಡ್ರಿಸುತ್ತಿದ್ದರು. ಮುಂದೆ ಒಂಬತ್ತು ದಿನ ಆ ದೇವಿಯ ಪೂಜೆ, ಬಡ ಬಗ್ಗರಿಗೆ ಊಟ, ದಕ್ಷಿಣೆ ಇವೆಲ್ಲ ನಡೆಯುತ್ತಿದ್ದವು. ಸಾಯಂಕಾಲಕ್ಕೆ ದೇವಿಯ ಮುಂದೆ ಗಾಯನ, ನರ್ತನ, ತರತರದ ಸೊಗಸಿನ ಆಟ ಇವೂ ನಡೆಯುತ್ತಿದ್ದವು. ಈ ಬಗೆಯಾಗಿ ಉತ್ಸವವು ದಸರೆಯವರೆಗೆ ಹತ್ತುದಿನ ಸಾಗುತ್ತಿತ್ತು. ದಸರೆಯ ದಿವಸ ಒಳ್ಳೆಯ ಸಡಗರದಿಂದ ದೇವಿಯ ಮೆರವಣಿಗೆ ನಡೆಯುತ್ತಿತ್ತು. ಅಂದಿನ ದಿವಸ ವಿಜಯ ನಗರದ ಅರಸರು ತಮ್ಮ ಬೊಕ್ಕಸದೊಳಗಿನ ಬೆಳ್ಳಿ ಬಂಗಾರ, ಮುತ್ತು ರತ್ನಗಳನ್ನು ಬಡಬಗ್ಗರಿಗೆ ದಾನ ಮಾಡುತ್ತಿದ್ದರು. ಪ್ರಜೆಗಳೂ ಕೂಡ ತಮ್ಮ ಆಪ್ತೇಷ್ಟರಿಗೆ ಬೆಳ್ಳಿ ಬಂಗಾರಗಳನ್ನು ಕೊಡುತ್ತಿದ್ದರು. ಈಗಲಾದರೂ ನಾವು ದಸರೆಯ ಹಬ್ಬದ ದಿವಸ ಬನ್ನಿಯನ್ನು ಬಂಗಾರವೆಂದು ನಮ್ಮ ಆಪ್ತೇಷ್ಟರಿಗೆ ಕೊಡುವ ವಾಡಿಕೆ ಬಂದಿದೆ.

ಈಗಲೂ ಕನ್ನಡಿಗರು ನಾಡಹಬ್ಬವನ್ನು ಆಚರಿಸುವರು; ಆದರೆ ಅದನ್ನು ಆಚರಿಸುವ ರೀತಿ ಮಾತ್ರ ಸ್ವಲ್ಪ ಬೇರೆಯಾಗಿದೆ. ಅಶ್ವಿನ ಶುದ್ಧ ಪ್ರತಿಪದೆಯ ದಿವಸ ಭುವಶ್ವನೇರಿಯ ಸ್ಥಾಪನೆಯನ್ನು ಮಾಡು ವರು. ದೇವಿಯ ಪೂಜೆಯು ಸಡಗರದಿಂದ ನಡೆಯುವದು. ಸಾಯಂಕಾಲಕ್ಕೆ ಕನ್ನಡ ನಾಡಿನ ಹಿರಿಯರ ಭಾಷಣಗಳು ಆಗುತ್ತವೆ. ಇದಲ್ಲದೆ ಹಾಡು, ಕುಣಿತ ಮುಂತಾದ ಸೊಗಸಿನ ಕಾರ್ಯಗಳೂ ನಡೆಯುತ್ತವೆ. ಈ ಬಗೆಯಾಗಿ ದಸರೆಯವರೆಗೆ ಹತ್ತು ದಿನ ಉತ್ಸವವು ನಡೆಯುತ್ತದೆ.

ನಾಡಹಬ್ಬದ ಕೊನೆಯ ದಿನವೇ ದಸರೆಯ ಹಬ್ಬ. ಅಂದು ಎಲ್ಲರ ಮನೆಯಲ್ಲಿಯೂ ಪಕ್ವಾನ್ನದ ಊಟ. ಸಾಯಂಕಾಲಕ್ಕೆ ಎಲ್ಲ ಜನರು ಸಿಂಗಾರಾಗಿ, ಊರ ಹೊರಗಿನ ಬನ್ನಿಯ ಗಿಡಕ್ಕೆ ಹೋಗು ವರು. ಅದರ ಪೂಜೆಯನ್ನು ಮಾಡಿ, ಆ ಮೇಲೆ ಬನ್ನಿಯನ್ನು ತೆಗೆದುಕೊಂಡು ಬರುವರು; ಅದನ್ನು ತಮ್ಮ ತಮ್ಮ ಆಪ್ತೇಷ್ಟರಿಗೆ ಬಂಗಾರವೆಂದು ಕೊಡುವರು.

ಇತ್ತೀಚೆಗೆ ನಾಡಹಬ್ಬವನ್ನು ನಮ್ಮ ನಾಡ ತುಂಬ ಆಚರಿಸುತ್ತಿರು ವರು. ಈ ಹಬ್ಬದಲ್ಲಿ ಕನ್ನಡಿಗರಿಗೆ ಅವರ ತಮ್ಮ ಹಿಂದಿನ ದೊಡ್ಡ

ಜನರು ಮಾಡಿದ ಮಹಾಕಾರ್ಯಗಳನ್ನು ಕುರಿತು ವಿದ್ವಾಂಸರ ಭಾಷಣಗಳಾಗುವವು.

ಪಂಪ ರನ್ನರಂಥ ಮಹಾಕವಿಗಳೂ, ಬಸವಣ್ಣ ವಿದ್ಯಾರಣ್ಯರಂಥ ಮಹಾತ್ಮರೂ, ಹುಕ್ಕ ಬುಕ್ಕರಂಥ ವೀರರೂ, ಬೆಳವಡಿ ಮಲ್ಲಮ್ಮ ಕಿತ್ತೂರ ಚೆನ್ನಮ್ಮರಂಥ ವೀರನಾರಿಯರೂ ಇದೇ ಕನ್ನಡನಾಡಿನಲ್ಲಿ ಆಗಿಹೋದರು. ಇಂಥವರನ್ನು ಪಡೆದ ನಮ್ಮ ಕನ್ನಡ ನಾಡದೇವಿಯ ಪೂಜೆಯನ್ನು ನಾವು ಮಾಡಲೇಬೇಕು. ಆಕೆಯ ಪಾದಕ್ಕೆ ಎರಗಬೇಕು; 'ಕನ್ನಡ ನಾಡು ಸೌಖ್ಯದಬೀಡು' ಆಗುವಂತೆ ಮಾಡೆಂದು ಬೇಡಿ ಕೊಳ್ಳಬೇಕು. ಇದು ಪ್ರತಿಯೊಬ್ಬ ಕನ್ನಡಿಗನ ಪವಿತ್ರ ಕರ್ತವ್ಯವು.

ಅಭ್ಯಸನಗಳು:—

೧ ನಾಡಹಬ್ಬವು ಎಲ್ಲ ಹಬ್ಬಗಳಲ್ಲಿ ಹೆಚ್ಚಿನದು ಯಾಕೆ?
೨ ವಿಜಯನಗರದ ಅರಸರು ನಾಡಹಬ್ಬವನ್ನು ಹೇಗೆ ಆಚರಿಸುತ್ತಿದ್ದರು?
೩ ಈಗ್ಗೆ ನಾವು ನಾಡಹಬ್ಬವನ್ನು ಹೇಗೆ ಆಚರಿಸುತ್ತೇವೆ?
೪ ದಸರೆಯ ದಿನ ನೀವು ಮಾಡುವ ಕೆಲಸಗಳನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.
೫ ನಾಡಹಬ್ಬವನ್ನು ಪ್ರತಿಯೊಬ್ಬ ಕನ್ನಡಿಗನು ಏಕೆ ಆಚರಿಸಬೇಕು?
೬ ನಾಡಹಬ್ಬ, ನಾಡಗುಡಿ, ನಾಡದೇವಿ ಈ ಶಬ್ದಗಳ ಅರ್ಥ ಹೇಳಿರಿ.

## ೪೦. ಕನಕದಾಸರ ಪದಗಳು

ರಾಗ:— ಶಂಕರಾಭರಣ, ರೂಪಚಾಪು ತಾಳ

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು ।
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ॥ ಪಲ್ಲ ॥
ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು ।
ಕೋಪಿಗಳಿದ್ದಲ್ಲಿ ಅನುಭವ ಗೋಷ್ಠಿಯ ಹೇಳಬಾರದು ।೧॥
ನಡೆವ ಕಾಲಕೆ ಒಡವೆಗಳನು ಕಳೆಕೊಂಡು ಕೂಡ್ರಬಾರದು ।
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ॥ ೨ ॥
ಸರಿ ಜನರೊಳು ತಾನು ಸಾಧಿಸಿ ಕಲಿಯುದೆ ನಿಲ್ಲಬಾರದು ।
ಪರರನು ನೋಯಿಸಿ ಪಾತಕಕೆ ತಾ ಗುರಿಯಾಗಿ ಬೀಳಬಾರದು ॥ ೩ ॥

ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡ ಹೋಗಬಾರದು ।
ಬಿಡಾರ ವಸ್ತ್ರಿಯು ಬಾಯ್ಬಿಡಕರಿದ್ದಲ್ಲಿ ಮಾಡಬಾರದು ॥ ೪ ॥
ಮುಂದೆ ಭಲಾಯೆಂದು ಹಿಂದೆ ನಿಂದಿಪರನು ಕೂಡಬಾರದು ।
ತಂದೆಯೊಡೆಯನಾದಿಕೇಶವನ ಸ್ಮರಣೆಯ ಮರೆಯಬಾರದು ॥ ೫ ॥

ಅಭ್ಯಾಸನಗಳು:—

೧ ಪಾಪಿಗಳಿದ್ದಲ್ಲಿ ಏನನ್ನು ತೋರಿಸಬಾರದು?
೨ ಕೋಪಿಗಳ ಮುಂದೆ ಏನನ್ನು ಹೇಳಬಾರದು?
೩ ಬಡತನ ಬಂದಾಗ ಎಲ್ಲಿಗೆ ಹೋಗಬಾರದು?
೪ ಸರಿಜನರೊಡನೆ ಇದ್ದಾಗ ನಾವು ಏನು ಮಾಡಬೇಕು?
೫ ಯಾರ ಮಾತನ್ನು ಕೇಳಿ ಜಗಳಾಡಬಾರದು?
೬ ಎಂಥವರ ಗೆಳೆತನ ಮಾಡಬಾರದು?
೭ ಯಾವ ಸ್ಮರಣೆಯನ್ನು ನಾವು ಮರೆಯಬಾರದು?
೮ ಕೆಳಗಿನ ಶಬ್ದಗಳ ಅರ್ಥವನ್ನು ಹೇಳಿರಿ:—
ವರಕವಿ, ಧರಣಿ, ಗೋಷ್ಠಿ, ಮಡದಿ, ನಿಂದಿಪರು, ಸ್ಮರಣೆ

## ೪೧. ಕಬ್ಬು

ಮೃತ್ಯುಂಜಯನು ೩ ನೆಯ ವರ್ಗದ ಹಿರಿಯಮಣಿ. ಅಂದು ಕಬ್ಬಿನ ತೋಟಕ್ಕೆ ಹೋಗುವದದೆ ಎಂದು ಅವನು ಗುರುಗಳಿಗೆ ನೆನಪು ಕೊಟ್ಟನು. ಗುರುಗಳು ಒಪ್ಪಿದರು. ಎಲ್ಲ ಬಾಲಕರು ಊರ ಮುಂದಿನ ಕಬ್ಬಿನ ತೋಟಕ್ಕೆ ಹೊರಡಲು ಸಿದ್ಧರಾದರು. ಕೂಡು ಗೀತೆ ಹಾಡುತ್ತ ಎಲ್ಲರೂ ಸಾಲಾಗಿ ನಡೆದರು. ತೋಟದ ಒಡೆಯನಾದ ಹನುಮಪ್ಪನು ಹಾಡುತ್ತ ಬರುವ ಬಾಲಕರನ್ನು ಕಂಡು ಹಿಗ್ಗಿದನು.

ಗುರು:—ಅಗೋ, ನೋಡಿರಿ! ಅಲ್ಲಿ ಕಾಣುವದೇ ಕಬ್ಬಿನ ತೋಟ. ಕಬ್ಬಿನ ಗಳೆಗಳು ನೀಟಾಗಿ ನಿಂತಿವೆ; ದಟ್ಟವಾಗಿ ಬೆಳೆದಿವೆ. ದೂರದಿಂದ ಎಷ್ಟು ಚೆಂದ ಕಾಣುವವು!

ಹನುಮಪ್ಪ:—ಮುಂದೆ ನಡೆಯಿರಿ; ಸಮೀಪಕ್ಕೆ ಹೋಗೋಣ; ಚೆನ್ನಾಗಿ ನೋಡುವಿರಂತೆ.

ಗುರು:—ಬಾಲಕರೇ, ಈ ಕಬ್ಬಿನ ಗಳೆಗಳನ್ನು ನೋಡಿರಿ. ಜೋಳದ ದಂಟುಗಳಿಗಿಂತ ಇವು ಹೆಚ್ಚು ಗಡುತರ ಅವೆ. ಒಂದೊಂದು



ಗಳಿಕ್ಕೆ ೮-೧೦ ಗಣ್ಣುಗಳಿವೆ. ಪ್ರತಿಯೊಂದು ಗಣ್ಣಿಗೆ ಒಂದು ಕಣ್ಣು ಆದೆ. ಗಣ್ಣಿನ ಸುತ್ತಲೂ ಎಲೆಗಳು ಬೆಳೆಯುತ್ತವೆ. ಕಬ್ಬಿನ ಎಲೆಗೆ 'ಸೋಗೆ' ಎನ್ನುವರು. ಕಬ್ಬಿನ ಗಳಗಳು ಬೆಳೆದಂತೆ ಸೋಗೆಗಳು ಒಣಗಿ ಉದುರುವವು. ಕಬ್ಬಿನ ತುದಿಗೆ ಹುಲ್ಲಿನ ಹೂವಿನಂತೆ ಹೊಡೆ ಹೊರಡುವದು. ಅದಕ್ಕೆ 'ಸೂಲಂಗಿ' ಎನ್ನುವರು. ಹೂ ಬಿಡುವ ಮುಂಚೆಯೇ ಕಬ್ಬನ್ನು ಕೊಯ್ಯುವರು.

ಮೃತ್ಯುಂಜಯ:—ಗುರುಗಳೇ ಕಬ್ಬು ಹೇಗೆ ಬಿತ್ತುವರು?

ಗುರು:—ಮಕ್ಕಳೇ, ಹನುಮಪ್ಪ ಇಲ್ಲಿಯೆ ಇದ್ದಾನೆ. ಅವನು ನಿಮಗೆ ಹೇಳುವನು.

ಹನುಮಪ್ಪ:-ಜೋಳ, ಬತ್ತಗಳಂತೆ ಕಬ್ಬು ಬಿತ್ತುವ ಪೈರು ಅಲ್ಲ; ನೆಡುವ ಬೆಳೆ. ಕಬ್ಬು ಕರಿನೆಲದಲ್ಲಿ ಚೆನ್ನಾಗಿ ಬೆಳೆಯುತ್ತದೆ. ಮೊದಲು ಭೂಮಿಯನ್ನು ಹರಗುವರು. ಎರಡು ಅಥವಾ ಮೂರು ಅಡಿ ಅಂತರ ಬಿಟ್ಟು, ಪೈರು ನೆಡುವ ಸಾಲುಗಳನ್ನು ಮಾಡುವರು. ಸಾಲುಗಳನ್ನು ಸುಮಾರು ಒಂದೂವರೆ ಅಡಿಯಷ್ಟು ಆಳವಾಗಿ ಅಗೆಯುವರು. ಬಳಿಕ ಗೊಬ್ಬರ ಹಾಕಿ, ಭೂಮಿಗೆ ನೀರುಣಿಸುವರು. ಗೇಣುದ್ದ ಒಳ್ಳೆಯ ಕಣ್ಣಿನ ಬಲಿತ ಗಣಿಕೆಗಳನ್ನು ಆ ಸಾಲುಗಳಲ್ಲಿ ನೆಡುವರು. ಒಳ್ಳೆಯ ಕಣ್ಣುಗಳುಳ್ಳ ಗಣಿಕೆಗಳನ್ನು ಆರಿಸಿ, ಕಣ್ಣು ಮೇಲೆ ಮಾಡಿ ಊರುವರು.

ಬಳಿಕ ಆ ನೆಲವನ್ನು ಸಾವಕಾಶವಾಗಿ, ಕಾಲಿನಿಂದ ಮೆಟ್ಟುವರು. ನೆಟ್ಟ ಗಣಿಕೆಗಳನ್ನು ಸಗಣಿಯಿಂದಲೂ, ಹುಲ್ಲಿನಿಂದಲೂ ಮುಚ್ಚಿ ಬಿಡುವರು. ಈ ಕೆಲಸ ಹೆಚ್ಚಾಗಿ ಜನವರಿ ತಿಂಗಳಲ್ಲಿ ನಡೆಯುವದು.

ಸಂಗ:—ಹನಮಪ್ಪಾ, ಕಬ್ಬು ಹೇಗೆ ಬೆಳೆಯುವದು?

ಹನುಮಪ್ಪ:—ಸ್ವಲ್ಪ ದಿವಸಗಳಲ್ಲಿ ಗಣಿಕೆಗಳ ಕಣ್ಣುಗಳಿಗೆ ಮೊಳಕೆಯೊಡೆಯುವವು. ಕಬ್ಬು ನೆಟ್ಟ ಬಳಿಕ ೩-೪ ದಿನಗಳಿಗೊಮ್ಮೆ ಭೂಮಿಗೆ ನೀರುಣಿಸುವರು. ಆಗಾಗ ಗೊಬ್ಬರವನ್ನು ಹಾಕುವರು. ಆರು ತಿಂಗಳಲ್ಲಿ ಕನಿಷ್ಠ ಮೂರು ಸಾರೆಯಾದರೂ, ಗೊಬ್ಬರ ಹಾಕ ಬೇಕಾಗುವದು. ಸಸಿಗಳ ಬುಡಕ್ಕೆ ಮಣ್ಣು ಏರಿಸಿ ಸಾಲುಗಳ ನಡುವೆ ಕಾಲುವೆ ಕಡಿಯುವರು. ಕಾಲುವೆಯಲ್ಲಿ ನೀರು ಹೆಚ್ಚಾಗಿ ನಿಂತರೆ, ಬೆಳೆಗೆ ಕೆಡಕು ಆಗುವ ಸಂಭವವಿದೆ. ಅದರಿಂದ ಹೆಚ್ಚಾದ ನೀರು ಹೊರಗೆ ಹೋಗುವಂತೆಯೂ ಇರಬೇಕು.

ಕನಕ:—ಹನುಮಪ್ಪಾ, ಕಬ್ಬಿನ ಬೆಳೆಗೆ ಮತ್ತೆ ಏನೇನು ಬೇಕು?

ಹನುಮಪ್ಪ:—ಕಬ್ಬಿಗೆ ಕರಿ ನೆಲವು ಬೇಕು ನೀರು,ಗೊಬ್ಬರಗಳು ಸಾಕಷ್ಟು ಬೇಕು. ೮-೧೦ ತಿಂಗಳುಗಳಿಗೆ ಕಬ್ಬನ್ನು ಕೊಯ್ಯುವರು. ಒಮ್ಮೆ ಕೊಯ್ದ ಬಳಿಕ ಭೂಮಿಯೊಳಗಿನ ಕಬ್ಬಿನ ಗಣಿಕೆಗಳು ಮತ್ತೆ ಮೊಳಕೆಯೊಡೆಯುತ್ತವೆ. ಆಗ ಎರಡನೆಯ ಬೆಳೆ ಸಿಗುತ್ತದೆ. ಹೀಗೆ ಕಬ್ಬಿನ ಬೆಳೆಯನ್ನು ಎರಡು ಸಾರೆ ತೆಗೆದುಕೊಳ್ಳುತ್ತೇವೆ. ಒಳ್ಳೆಯದು, ಈಗ ಎಲ್ಲರೂ ಕಬ್ಬು ತಿನ್ನೋಣ.

ಹನುಮಪ್ಪನ ಆಳು ಕಬ್ಬಿನ ಗಳೆಗಳನ್ನು ತಂದು, ತುಂಡು ತುಂಡಾಗಿ ಕಡಿದನು. ಎಲ್ಲ ಬಾಲಕರು ಒಂದೊಂದು ತುಂಡು ತಕ್ಕೊಂಡು ತಿನ್ನ ತೊಡಗಿದರು. ಕಬ್ಬಿನ ಸಿಪ್ಪೆಗಳನ್ನು ಒಂದು ಕಡೆ ಹಾಕಿದರು. ರುಚಿಕಟ್ಟಾದ ಆ ಕಬ್ಬನ್ನು ತಿಂದು ಎಲ್ಲರೂ ಸಂತೋಷಬಟ್ಟರು.

ಮಾಧವ:—ಹನುಮಪ್ಪಾ, ಕಬ್ಬಿನ ತೋಟದ ಸುತ್ತಲೂ ಮುಳ್ಳು ಬೇಲಿಯನ್ನು ಯಾಕೆ ಹಚ್ಚುವರು?

ಹನುಮಪ್ಪ:—ಕಬ್ಬಿನ ಪೈರಿಗೆ ನರಿ ಕಾಡಹಂದಿಗಳ ಉಪದ್ರವವು ಬಹಳ. ಅವು ಗುಂಪು ಗುಂಪಾಗಿ ತೋಟದೊಳಗೆ ಹೊಕ್ಕು, ಪೈರನ್ನು ಹಾಳು ಮಾಡುವವು. ಅದರಿಂದ ಭದ್ರವಾದ ಬೇಲಿಗಳನ್ನು ಹಾಕಬೇಕು. ಅಲ್ಲದೆ ರಾತ್ರಿಯಲ್ಲಿ ತೋಟವನ್ನು ಕಾಯಬೇಕಾಗುವದು. ಮಲೆನಾಡಿನಲ್ಲಿ ಬಂದೂಕಿನಿಂದ ಕಾಡಹಂದಿಗಳನ್ನು ಹೊಡೆದು ಕೊಲ್ಲುವರು.



ಆ ಮೇಲೆ ಹನುಮಪ್ಪನು ಅವರೆಲ್ಲರನ್ನು ಆಲೆಯ ಮನೆಗೆ ಕರೆದುಕೊಂಡು ಹೋದನು.

ಮಾಧವ:—ಹನುಮಪ್ಪಾ, ಆ ಆಲೆಯ ಮನೆಯಲ್ಲಿ ಯಾವ ಕೆಲಸವು ನಡೆಯುವದು?

ಹನುಮಪ್ಪ:—ಆಲೆಯ ಮನೆಯಲ್ಲಿ ನಡೆಯುವ ಕೆಲಸಗಳನ್ನು ಈಗ ಹೇಳುವೆನು. ಇವು ಕಬ್ಬಿನ ಹೊರೆಗಳು. ಕಬ್ಬಿನ ಗಳೆಗಳನ್ನು ಈ ಗಾಣದಲ್ಲಿ ಆ ಆಳು ಹಿಡಿಯುವನು. ಎತ್ತುಗಳು ಸುತ್ತಲೂ ತಿರುಗುವವು. ಆದರಿಂದ ಗಾಣವೂ ತಿರುಗತೊಡಗುವದು. ಗಾಣದಲ್ಲಿ ಸಿಕ್ಕು ಕಬ್ಬು ಹಿಪ್ಪೆಯಾಗಿ, ಒಂದು ಕಡೆ ಹೊರಗೆ ಬರುತ್ತಿದೆ. ಕೆಳಗಿನ ಪಾತ್ರೆಯಲ್ಲಿ ಕಬ್ಬಿನ ರಸವು ಬೀಳುತ್ತದೆ. ಈ ರಸಕ್ಕೆ 'ಕಬ್ಬಿನ ಹಾಲು' ಎಂದೆನ್ನುವರು. ಅಗೋ ನೋಡಿರಿ! ಅಲ್ಲಿ ಒಲೆಯ ಮೇಲೆ ಒಂದು ದೊಡ್ಡ ಕೊಪ್ಪರಿಗೆಯಿದೆ. ಅದರ ಕೆಳಗೆ ಉರಿಯು ಕಾಣುತ್ತಿರುವದಲ್ಲವೇ? ಆ ಕೊಪ್ಪರಿಗೆಯಲ್ಲಿ ಕಬ್ಬಿನ ಹಾಲನ್ನು ಹಾಕಿರುವರು. ಹಾಲು ಕುದಿಯುತ್ತಿರುವದು. ಕಸರು ತೇಲಿ ಮೇಲೆ ಬರುತ್ತಿರುವದು, ನೋಡಿರಿ. ಕಸರನ್ನು ಹೊರಗೆ ತೆಗೆಯುತ್ತಿರುವನು; ಇನ್ನು ರಸವು ಕುದಿದು ಗಟ್ಟಿಯಾಗುವದು. ಕಾದ ರಸವನ್ನು ಅಚ್ಚಿನ ಹಲಗೆಗೆ ಹಾಕುವರು. ಆರಿದ ಮೇಲೆ ಆ ಅಚ್ಚುಗಳನ್ನು ತೆಗೆಯುವರು. ಹೀಗೆ ಬೆಲ್ಲದ ಪೆಂಟಿಗಳಾಗುವವು. ಹದವನ್ನು ನೋಡಿ ಪಾಕವನ್ನು ಕೆಳಗೆ

ಇಳಿಸಿ ಆರಿದ ಬಳಿಕ ಅದನ್ನು ಉಜ್ಜಿ ಪುಡಿ ಮಾಡುವರು. ಅದೇ ಕೆಂಪು ಸಕ್ಕರೆಯಾಗುವದು. ಈಗ ಬಿಳಿಯ ಸಕ್ಕರೆ ಮಾಡುವ ದೊಡ್ಡ ಕಾರಖಾನೆಗಳು ಆಗಿವೆ.

ಹನುಮಪ್ಪ:—ಗುರುಗಳೇ, ಬಹಳ ಹೊತ್ತು ಆಯಿತು; ತುಸು ದಣಿವಾರಿಸಿ ಕೊಳ್ಳಿರಿ. ತಾವೂ ಎಲ್ಲ ಬಾಲಕರೂ ಕಬ್ಬಿನ ಹಾಲು ಕುಡಿಯಿರಿ. ತುಸು ಹೊಸ ಬೆಲ್ಲವನ್ನು ತಿನ್ನಿರಿ. ಕಾಕಂಬಿಯ ರುಚಿಯನ್ನು ನೋಡಿರಿ.

ಗುರುಗಳು:—ಹಾಗೇ ಆಗಲಿ! ಬಾಲಕರೇ, ಇಲ್ಲಿಯೇ ನೆರಳಲ್ಲಿ ಸಾಲಾಗಿ ಕುಳಿತುಕೊಳ್ಳಿರಿ.

ಹನುಮಪ್ಪನ ಆಳು ಕಬ್ಬಿನ ಹಾಲು ತಂದನು. ಒಬ್ಬೊಬ್ಬರೇ ಪಾಳಿಯಂತೆ ಹಾಲು ಕುಡಿದರು. ಮೇಲೆ ತುಸು ಬೆಲ್ಲವನ್ನು ತಿಂದರು. ತರುವಾಯ ಎಲ್ಲರೂ ಹನುಮಪ್ಪನ ಉದಾರಗುಣಕ್ಕೆ ಮೆಚ್ಚಿ, ಅವನಿಗೆ ನಮಸ್ಕರಿಸಿ ಹೊರಟರು. ಇಷ್ಟರಲ್ಲಿ ಹತ್ತು ಗಂಟೆಯಾಯಿತು. ಸಾಲಾಗಿ ಸಾಲೆಗೆ ನಡೆದರು. ಅಂದು ಆ ಬಾಲಕರ ಬಾಯಲ್ಲಿ ಕಬ್ಬು ಬೆಲ್ಲಗಳ ಮಾತೇ ಮಾತು!

**ಅಭ್ಯಾಸನಗಳು:—**

೧ ಬಾಲಕರು ಯಾವ ತೋಟವನ್ನು ನಿರೀಕ್ಷಣೆ ಮಾಡಲಿಕ್ಕೆ ಹೋಗಿದ್ದರು?
೨ ಆ ತೋಟದ ಯಜಮಾನರು ಯಾರು?
೩ ಕಬ್ಬು ಹೇಗೆ ನೆಡುವರು?
೪ ಕಬ್ಬು ಚೆನ್ನಾಗಿ ಬೆಳೆಯಬೇಕಾದರೆ ಏನೇನು ಬೇಕು?
೫ ಕಬ್ಬಿನ ತೋಟಕ್ಕೆ ಬೇಲಿಯನ್ನು ಯಾಕೆ ಹಚ್ಚುವರು?
೬ ಬೆಲ್ಲವನ್ನು ಹೇಗೆ ಮಾಡುವರು?
೭ ಹನುಮಪ್ಪನು ತೋರಿಸಿದ ಉದಾರ ಗುಣವು ಯಾವದು?
೮ ಕಬ್ಬಿನ ತೋಟದ ವರ್ಣನೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ,

## ೪೨. ಶ್ರವಣಕುಮಾರ

"ಮಗನೇ ಶ್ರವಣಾ, ಎಲ್ಲಿ ಇರುವೆ?"

"ಇಲ್ಲಿಯೇ ಇರುವೆನು; ಅವ್ವಾ, ಏನು ಕೆಲಸವಿರುವದು? ಹೇಳು."

"ಮಗನೇ, ನನಗೂ ನಿನ್ನ ಹಡೆದವರಿಗೂ ತೀರ್ಥಯಾತ್ರೆ ಮಾಡಬೇಕೆಂಬ ಆಸೆ ಆಗಿದೆ; ನಾವಿಬ್ಬರೂ ಮುಪ್ಪಿನಮುದುಕರು;



ಮೇಲಾಗಿ ಕುರುಡರು; ನೀನು ಇನ್ನೂ ಸಣ್ಣ ಹುಡುಗ; ನಮಗೆ ತೀರ್ಥ ಯಾತ್ರೆಯನ್ನು ಹೇಗೆ ಮಾಡಿಸುವೆ?"

"ಅವ್ವಾ, ಇದಕ್ಕೆ ಯಾಕೆ ಚಿಂತೆ? ಒಂದು ಕಾವಡಿಯನ್ನು ತರುವೆನು. ಅದರ ಎರಡೂ ಕಡೆಯ ನೆಲವುಗಳಲ್ಲಿ ಎರಡು ಬುಟ್ಟಿಗಳನ್ನು ಇಡುವೆನು. ಒಂದರಲ್ಲಿ ನೀನು ಕುಳಿತುಕೊಳ್ಳು; ಇನ್ನೊಂದರಲ್ಲಿ ಅಪ್ಪನು ಕುಳಿತುಕೊಳ್ಳಲಿ. ನಾನು ಕವಡಿಯನ್ನು ಹೊತ್ತುಕೊಂಡು ನಡೆಯುವೆನು. ಬೇಕಾದ ತೀರ್ಥಗಳಿಗೆ ಹೋಗಿ ಬರೋಣ."

ಶ್ರವಣನು ಒಬ್ಬ ಋಷಿಯ ಮಗನು. ಆತನಿಗೆ ಈಗ ಸುಮಾರು ಹನ್ನೆರಡು ವರುಷ. ತಾಯಿತಂದೆಗಳಿಗೆ ತೀರ್ಥಯಾತ್ರೆ ಮಾಡಿಸಲಿಕ್ಕೆ ಹೊರಟಿದ್ದಾನೆ. ಹೆಗಲ ಮೇಲೆ ಕಾವಡಿ. ಅದರ ಒಂದು ಬುಟ್ಟಿಯಲ್ಲಿ ತಾಯಿಯನ್ನು, ಇನ್ನೊಂದರಲ್ಲಿ ತಂದೆಯನ್ನು ಕುಳ್ಳಿರಿಸಿರುವನು. ಶ್ರವಣನಿಗೆ ಬಹಳ ಹುರುಪು. ಕಾವಡಿಯನ್ನು ಹೊತ್ತುಕೊಂಡು ತೀರ್ಥಯಾತ್ರೆಗೆ ನಡೆದನು.

ಒಂದು ದಿನ ಶ್ರವಣನು ಅಡವಿಯಲ್ಲಿ ನಡೆದಿದ್ದನು. ಸಂಜೆ ಆಯಿತು; ಕತ್ತಲೆ ಬಿದ್ದಿತು. ಆತನು ಒಂದು ಗಿಡದ ಬುಡದಲ್ಲಿ ಕಾವಡಿಯನ್ನು ಇಳಿಸಿದನು. ಆಗ ಶ್ರವಣನ ತಂದೆಯು- "ಮಗನೇ, ನೀರಡಿಕೆಯಾಗಿದೆ; ನೀರನ್ನು ತಂದು ಕೊಡು," ಎಂದು ಹೇಳಿದನು.

ಶ್ರವಣನು ಕೈಯಲ್ಲಿ ಬಿಂದಿಗೆಯನ್ನು ಹಿಡಿದುಕೊಂಡು ನೀರನ್ನು ಹುಡುಕುತ್ತ ನಡೆದನು. ಸ್ವಲ್ಪದೂರದಲ್ಲಿ ಒಂದು ಹೊಳೆ ಹರಿಯುತ್ತಿರುವದು ಕಾಣಿಸಿತು. ಬೇಗನೆ ಹೊಳೆಗೆ ಹೋದನು. ಕೈಯೊಳಗಿನ ಬಿಂದಿಗೆಯನ್ನು ಹೊಳೆಯಲ್ಲಿ ತುಂಬಿಸುತ್ತಿದ್ದನು 'ಆಗ ಬುಡು ಬುಡು' ಸಪ್ಪಳವಾಗುತ್ತಿತ್ತು.

'ಅಯೋಧ್ಯೆ' ಎಂಬ ನಾಡಿನ ಅರಸನಾದ ದಶರಥನು ಆ ಅಡವಿಗೆ ಅಂದು ಬೇಟೆಗೆ ಬಂದಿದ್ದನು. ಆತನು ಬಾಣ ಹೊಡೆಯುವದರಲ್ಲಿ ಬಹಳ ಜಾಣನು. ಸಪ್ಪಳು ಕೇಳಿದರೆ ಸಾಕು. ಆ ಸಪ್ಪಳ ಮಾಡಿದ ಪ್ರಾಣಿ ಕಾಣಿಸದಿದ್ದರೂ ಅಡ್ಡಿಯಿಲ್ಲ. ಆ ಸಪ್ಪಳದ ಸುಳುವಿನಿಂದಲೇ ಅದಕ್ಕೆ ಬಾಣವನ್ನು ಬಿಟ್ಟು ಅದನ್ನು ಕೊಲ್ಲುವನು. ಸಂಜೆಯಾದರೂ ಈ ದಿನ ಬೇಟೆ ಅವನಿಗೆ ಸಿಕ್ಕಿರಲಿಲ್ಲ. ಹೊಳೆಗೆ ನೀರು ಕುಡಿಯಲಿಕ್ಕೆ ಬರುವ ಮೃಗಗಳನ್ನು ಹೊಡೆಯಬೇಕೆಂದು ಅವುಗಳ ದಾರಿಕಾಯುತ್ತ ದೂರದಲ್ಲಿ ಕುಳಿತುಕೊಂಡಿದ್ದನು.

ಶ್ರವಣನು ಬಿಂದಿಗೆ ತುಂಬಿಸುತ್ತಿದ್ದಾಗ, ಬುಡುಬುಡು ಸಪ್ಪಳವಾಗುತ್ತಿತ್ತಲ್ಲವೇ? ಆ ಸಪ್ಪಳವು ದೂರದಲ್ಲಿದ್ದ ದಶರಥನಿಗೆ ಕೇಳಿಸಿತು. ಆನೆಯು ಹೊಳೆಯಲ್ಲಿ ನೀರು ಕುಡಿಯುತ್ತಿರುವದೆಂದು ತಿಳಿದನು. ಕೂಡಲೆ ಬಾಣವನ್ನು ಬಿಟ್ಟನು. ಈ ಬಾಣವು ಶ್ರವಣನಿಗೆ ತಾಗಿತು. ಆಗ ಶ್ರವಣನು—"ಅಯ್ಯೋ! ಘಾತವಾಯಿತು. ಅಯ್ಯೋ! ಸತ್ತೆನು!" ಎಂದು ಚೀರಿದನು. ಆಗಲೇ ಕೆಳಗೆ ಬಿದ್ದುಬಿಟ್ಟನು.

ದಶರಥನು ಶ್ರವಣನ ಆ ಬೊಬ್ಬೆಯನ್ನು ಕೇಳಿ ಗಾಬರಿಯಾದನು. "ಅಯ್ಯೋ! ಆನೆಯು ನೀರು ಕುಡಿಯುತ್ತಿರುವದು ಎಂದು ತಿಳಿದು ಬಾಣವನ್ನು ಬಿಟ್ಟೆನು; ಮನುಷ್ಯನಿಗೆ ಬಡಿಯಿತೇ!" ಎಂದು ಚಡಪಡಿಸುತ್ತ ಹೊಳೆಗೆ ಬಂದನು. ನೋಡುತ್ತಾನೆ. ಒಬ್ಬ ಹುಡುಗನು ಸಾಯುವ ಸಂಕಟದಲ್ಲಿ ಬಿದ್ದಿರುವನು. ಶ್ರವಣನು ತನ್ನ ಸಮೀಪಕ್ಕೆ ಬಂದ ದಶರಥನಿಗೆ– "ಅಯ್ಯಾ, ನನ್ನ ತಂದೆಗೆ ಬೇಗ ನೀರನ್ನು ಒಯ್ದು ಕೊಡು, ನನ್ನ ಮುಪ್ಪಿನ ತಂದೆತಾಯಿಗಳನ್ನು ಸಲಹು" ಎಂದು ಹೇಳಿದನು. ಅಷ್ಟರಲ್ಲಿ ಆತನ ಪ್ರಾಣವು ಹೋಯಿತು.

ದಶರಥನು ಈಗ ಏನು ಮಾಡಬೇಕು? ನೀರನ್ನು ತೆಗೆದುಕೊಂಡು ಶ್ರವಣನ ತಂದೆತಾಯಿಗಳಿದ್ದಲ್ಲಿಗೆ ಬಂದನು. ತಾನು ಯಾರೆಂಬದನ್ನು

ಅವರಿಗೆ ತಿಳಿಸಿದನು. ನಡೆದ ಸಂಗತಿಯನ್ನೆಲ್ಲ ಹೇಳಿದನು. ಮಗನು ಸತ್ತನೆಂಬುದನ್ನು ಕೇಳಿ ಆ ಮುದುಕರು ಹೌಹಾರಿ ಎದೆ ಎದೆ ಬಡಿದು ಕೊಂಡರು; ಬಹಳ ಅತ್ತರು.

ದಶರಥನು ಆ ಮುದುಕರಿಗೆ ಸಮಾಧಾನವನ್ನು ಹೇಳಿದನು. 'ನನ್ನಿಂದ ತಪ್ಪಾಯಿತು, ನನ್ನ ಮೇಲೆ ದಯೆ ತೋರಿಸಿರಿ,' ಎಂದು ಬೇಡಿ ಕೊಂಡನು. ಆಗ ಆ ಋಷಿಯು— "ನಿನ್ನಿಂದ ನಮಗೆ ದೊಡ್ಡ ಕೇಡು ಆಯಿತು; ಆದರೂ ನಾನು ನಿನಗೆ ಹೆಚ್ಚಿನ ಕೇಡನ್ನು ಮಾಡುವದಿಲ್ಲ. ನಿನಗೂ ಮುಪ್ಪಿನಲ್ಲಿ ಮಗನ ಅಗಲಿಕೆ ಆಗಲಿ; ಆಗ ನಿನಗೆ ನಮಗಾದ ದುಃಖದ ಅನುಭವವು ಬಂದೀತು" ಎಂದು ಶಪಿಸಿದನು.

ಮಗನ ದುಃಖದಿಂದ ಆ ಮುದಕರು ಆಗಲೇ ತೀರಿಕೊಂಡರು. ದಶರಥನು ಮೋರೆ ಸಪ್ಪಗೆ ಮಾಡಿಕೊಂಡು ತನ್ನ ಊರಿಗೆ ಬಂದನು.

ಮುಂದೆ ಬಹುಕಾಲದ ತರುವಾಯ ದಶರಥನು ತನ್ನ ಮಗನಾದ ರಾಮಚಂದ್ರನನ್ನು ಹದಿನಾಲ್ಕು ವರುಷ ವನವಾಸಕ್ಕೆ ಕಳಿಸ ಬೇಕಾಯಿತು. ಮಗನು ವನಕ್ಕೆ ಹೋದ ಬಳಿಕ ದಶರಥನಿಗೆ ಬಹಳ ದುಃಖವಾಯಿತು. ರಾಮನಂಥ ಉತ್ತಮನಾದ ಮಗನನ್ನು ಬಿಟ್ಟು ಬದುಕುವದು ಹೇಗೆ? ಹಗಲಿರುಳು 'ರಾಮ ರಾಮ' ಎಂದು ಬಡಬಡಿಸ ಹತ್ತಿದನು. ಶ್ರವಣನ ತಂದೆಯು ಕೊಟ್ಟ ಶಾಪವು ಈಗ ಆತನ ನೆನಪಿಗೆ ಬಂದಿತು. ಆ ಶಾಪದಿಂದಲೇ ತನಗೆ ಈ ಗತಿಯಾಯಿತೆಂದು ಬಹಳ ಮರುಗಿದನು, ಶ್ರವಣನ ಮರಣದಿಂದ ಆತನ ಮುಪ್ಪಿನ ತಂದೆ-ತಾಯಿಗಳಿಗೆ ಆದ ದುಃಖದ ಕಲ್ಪನೆಯು ಈಗ ದಶರಥನಿಗೆ ಆಯಿತು. ಮಗನ ವಿಯೋಗದಿಂದಲೇ ದಶರಥನು ಮಡಿದನು.

**ಅಭ್ಯಾಸಗಳು:—**

೧. ಶ್ರವಣನು ತನ್ನ ತಂದೆತಾಯಿಗಳನ್ನು ಎಲ್ಲಿಗೆ ತೆಗೆದುಕೊಂಡು ನಡೆದಿದ್ದನು?

೨. ಶ್ರವಣನು ನೀರು ತರಲಿಕ್ಕೆ ಹೋದಾಗ ಏನಾಯಿತು?

೩. ಶ್ರವಣನು ಸಾಯುವ ಮುಂದೆ ದಶರಥನಿಗೆ ಏನು ಹೇಳಿದನು?

೪. ಶ್ರವಣನ ತಂದೆತಾಯಿಗಳು ತಮ್ಮ ಮಗನು ಸತ್ತ ಸುದ್ದಿಯನ್ನು ಕೇಳಿ ಏನು ಮಾಡಿದರು?

೫. ಋಷಿಯು ದಶರಥನಿಗೆ ಏನೆಂದು ಶಾಪಕೊಟ್ಟನು?

೬. ಕಡೆಗೆ ದಶರಥನ ಸ್ಥಿತಿಯು ಏನಾಯಿತು?

# ೩೪. ನೀತಿವಚನಗಳು

ಕೋಳಿ ಕೂಗದ ಮುನ್ನ ಏಳುವದು ನಿತ್ಯ
ದಯಾಳು ದೇವರನು ಭಕ್ತಿಯಿಂ ನೆನೆದರೆ।
ಆಳಿನಾಳಯ್ಯ ಸರ್ವಜ್ಞ ॥ ೧ ॥

ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ।
ದುರ್ಜನರ ಕೂಡ ಬಡಿದಾಟ ಬಚ್ಚಲ।
ರೊಜ್ಜಿನಂತಿಹುದು ಸರ್ವಜ್ಞ ॥ ೨ ॥

ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಂಗೆ।
ಕೊಟ್ಟಿದ್ದು ಕೆಟ್ಟಿತೆನಬೇಡ ಅದು ಮುಂದೆ।
ಕಟ್ಟಿಹುದು ಬುತ್ತಿ ಸರ್ವಜ್ಞ ॥ ೩ ॥

ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ
ಕುಲವೇನೋ ಅವಂದಿರ ಕುಲವೇನೋ
ಸಕಲ ಜೀವಿಗಳಿಗೆ ಲೇಸನು ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು ॥ ೪ ॥

ದಯವಿಲ್ಲದ ಧರ್ಮವು ಆವುದಯ್ಯಾ?
ದಯವೇ ಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ಧರ್ಮದ ಮೂಲವಯ್ಯಾ ಕೂಡಲಸಂಗಮದೇವಾ ॥ ೫ ॥

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು
ಪ್ರಾಣಿಗಳ ಕೊಂದು ನಲಿನಲಿದಾಡುವ
ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ
ಮರುಗುವಂತೆ ಅವಕ್ಕೇಕೆ ಮರುಗನು?
ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ
ಇದುಕಾರಣ ಚೆನ್ನಮಲ್ಲಿಕಾರ್ಜುನಯ್ಯನ
ಭಕ್ತನಾಗಿದ್ದು ಜೀವಹಿಂಸೆ ಮಾಡುವ
ಮಾದಿಗರನೇನೆಂಬೆನಯ್ಯಾ! ॥೬॥

# ಕಠಿಣ ಶಬ್ದಗಳ ಅರ್ಥ

ಅನುಜ = ತಮ್ಮ
ಅನುಗ್ರಹ = ದಯೆ, ಕೃಪೆ, ಹಿತ
ಅಪಕ್ವ = ಹಣ್ಣಾಗದ, ಮಾಗದ
ಅಪರಿಮಿತ = ಮಿತಿಯಿಲ್ಲದ, ಬಹಳ
ಅಪಾಯ = ತೊಂದರೆ, ಹಾನಿ
ಅಪಾರ = ಹೇರಳ, ಬಹಳ
ಅಮಂಗಲ = ಅಶುಭ
ಅಮೃತ = ಸಾವಿಲ್ಲದ, ದೇವ ದಾನವರು ಸಮುದ್ರ ಮಥಿಸಿದಾಗ ದೊರೆತ ಸಿಹಿ ವಸ್ತು
ಅರಿ = ಅರ್ಥ, ತಿಳಿ
ಅಲಂಕರಿಸು = ಸಿಂಗರಿಸು
ಅಲ್ಪ = ಕ್ಷುದ್ರ, ಸಣ್ಣ
ಅವಚು = ಅಪ್ಪಿಕೊಳ್ಳು
ಅಸು = ಪ್ರಾಣ, ಜೀವ
ಅಸ್ತಿತ್ವ = ಇರುವಿಕೆ
ಅಳವು = ಅಳತೆ, ಸಾಮರ್ಥ್ಯ
ಅಳಿ = ಇಲ್ಲದಾಗು
ಆಗಸ = ಆಕಾಶ
ಆತಂಕ = ತೊಡಕು, ಅಡ್ಡಿ
ಆಧುನಿಕ = ಇತ್ತೀಚಿನ
ಆಮಂತ್ರಣ = ಕರೆ, ಹೇಳಿಕೆ
ಆರೋಗ್ಯ = ರೋಗವಿಲ್ಲದಿರುವಿಕೆ
ಆಲೆ = ಗಾಣ
ಆವಿ = ಉಗಿ
ಆಶ್ರಮ = ಕುಟೀರ, ಗುಡಿಸಲು
ಆಹಾರ = ತಿನ್ನುವ ವಸ್ತು
ಇಂಪು = ಸವಿ, ಮಧುರ
ಈಡುಮಾಡು = ಗುರಿಮಾಡು
ಈಡೇರಿಸು = ವಚನ ಪಾಲಿಸು, ನೆರವೇರಿಸು
ಉಗ್ರ = ಕಠೋರ, ಕಠಿಣ
ಉತ್ಕರ್ಷ = ಹೆಚ್ಚಳ, ಮೇಲ್ಮೆ
ಉದಾರ = ದೊಡ್ಡ ಮನಸ್ಸಿನವ
ಉಪದೇಶ = ಬೋಧೆ
ಊಹಿಸು = ವಿಚಾರಿಸು, ತರ್ಕಿಸು
ಋಣಿಯಾಗಿರು = ಕೃತಜ್ಞನಾಗಿರು
ಎಗ್ಗತನ = ಹೆಡ್ಡತನ
ಎಡತಾಕು = ಮೇಲಿಂದ ಮೇಲೆ ಬರುತ್ತಿರು
ಎಚ್ಚರಗೇಡಿತನ = ಅಲಕ್ಷ್ಯ
ಎರಚು = ಚಿಮುಕಿಸು, ಚೆಲ್ಲು
ಏಕನಿಷ್ಠೆ = ಒಂದೇಮನಸ್ಸು
ಏಳ್ಗೆ = ಅಭಿವೃದ್ಧಿ, ಉನ್ನತಿ
ಒಕ್ಕೊರಲು = ಒಂದೇ ಧ್ವನಿ
ಒದಗಿಸು = ಅನುಕೂಲಮಾಡು, ಕೊಡು
ಒಂದೆಡೆ = ಒಂದು ಕಡೆ
ಒಡನೆ = ಕೂಡಲೆ
ಒರಲು = ನರಳು, ಕೂಗಾಡು
ಒರೆ = ಹೇಳು, ತಿಕ್ಕು, ತೇಯು
ಒಲಿ = ಮೆಚ್ಚು
ಓಲೆ = ಪತ್ರ
ಅಂಟಿಸು = ಹಚ್ಚು
ಕಂಗಳು = ಕಣ್ಣುಗಳು
ಕದನ = ಕಲಹ, ಯುದ್ಧ
ಕಡು = ಬಹಳ
ಕರುಣೆ = ದಯೆ, ಕೃಪೆ
ಕಲ್ಪವೃಕ್ಷ = ಬೇಡಿದ್ದನ್ನು ಕೊಡುವ ದೇವಲೋಕದ ಗಿಡ
ಕವೀಂದ್ರ = ಕವಿಗಳಲ್ಲಿ ಶ್ರೇಷ್ಠ
ಕಳವಳಿಸು = ದುಃಖಿಸು, ವ್ಯಥೆಪಡು
ಕುತ್ತ = ಸಂಕಟ, ರೋಗ
ಕುಲಜ = ಒಳ್ಳೇಕುಲದಲ್ಲಿ ಹುಟ್ಟಿದವ

ಕೆಣಕು = ಕೆರಳಿಸು, ರೇಗಿಸು
ಕೇಂದ್ರ ಸ್ಥಾನ = ಮಧ್ಯ ಸ್ಥಳ
ಕೈಗೂಡು = ಸಾಧಿಸು
ಕೈಲಾಗದವ = ಹೇಡಿ, ಆಲಸಿ
ಕೊಟ್ಟಿಗೆ = ದನದ ಮನೆ, ಹಟ್ಟಿ
ಕೋಲಾಹಲ = ಕೂಗು, ಗದ್ದಲ, ಬೊಬ್ಬೆ
ಖ್ಯಾತಿ = ಕೀರ್ತಿ, ಪ್ರಸಿದ್ಧಿ
ಗಣ್ಯ = ಮರ್ಯಾದೆಗೆ ತಕ್ಕವ
ಗತ್ತು = ಬಗೆ, ರೀತಿ, ಧೋರಣೆ
ಗದ್ದರಿಸು = ಗರ್ಜಿಸು, ಬೆದರಿಸು
ಗುಟ್ಟು = ರಹಸ್ಯ, ಗೂಢ
ಗೋಷ್ಠಿ = ಸಭೆ, ಮಾತುಕತೆ
ಗೌಡ = ಹಳ್ಳಿಯವ
ಘನತೆ = ಶ್ರೇಷ್ಠತೆ, ಮಹಿಮೆ
ಜಗನ್ಮಾತೆ = ಲೋಕದ ತಾಯಿ
ಜನನಿ = ತಾಯಿ
ಜಲ = ನೀರು
ಜಾಲಗಾರ = ಅಂಬಿಗ, ಮೀನಗಾರ
ಜೀರ್ಣೋದ್ಧಾರ = ಹಾಳಾದದ್ದನ್ನು ಸರಿಮಾಡು
ತನುಜ = ಮಗ
ತಂಗೂಳು = ತಂಗಳ ಆಹಾರ
ತಾಳ್ಮೆ = ಸಹನೆ, ಸಮಾಧಾನ
ತಿವಿ = ಚುಚ್ಚು
ತೀರ್ಥಯಾತ್ರೆ = ಕ್ಷೇತ್ರಯಾತ್ರೆ
ತೀರ್ಪು = ನಿರ್ಣಯ
ತೀಕ್ಷ್ಣ = ಹರಿತ
ತೆಪ್ಪಗೆ = ಸುಮ್ಮನೆ
ತೆರಳು = ಹೋಗು
ತೊರೆ = ಬಿಡು
ತೋರ್ಪಡಿಸು = ತೋರಿಸು
ದಯಪಾಲಿಸು = ಕರುಣಿಸು, ಕೊಡು
ದಾನವ = ದೈತ್ಯ, ರಾಕ್ಷಸ
ದ್ವಾರ = ಬಾಗಿಲು
ದಿವ್ಯ = ಶ್ರೇಷ್ಠ
ದುರ್ಜನ = ಕೆಟ್ಟ ಜನ
ದುರ್ಬಲ = ಬಲಹೀನ
ದುರುಳ = ದುಷ್ಟ, ಕೆಟ್ಟ
ದುಶ್ಚಟ = ಕೆಟ್ಟ ಚಟ
ದೇವಾಧಿದೇವ = ದೇವರ ದೇವ, ಮಹಾದೇವ
ಧನ್ಯ = ಕೃತಾರ್ಥ, ಪುಣ್ಯವಂತ
ಧನಿಕ = ಸಿರಿವಂತ
ಧರಣಿ = ಭೂಮಿ
ಧ್ಯಾನ = ಚಿಂತನೆ, ಸ್ಮರಣೆ
ನಿಪುಣ = ಜಾಣ
ನಿರೀಕ್ಷಿಸು = ಚಿತ್ತವಿಟ್ಟು ನೋಡು
ಪಣತೊಡು = ಪ್ರತಿಜ್ಞೆ ಮಾಡು
ಪರರು = ಹೆರವರು, ಬೇರೆಯವರು
ಪರಸ್ಪರ = ತಮ್ಮತಮ್ಮಲ್ಲಿ, ಒಬ್ಬರಿಗೊಬ್ಬರು
ಪರಾಕ್ರಮ = ಶೌರ್ಯ, ಬಲ
ಪಸರಿಸು = ಹಬ್ಬು
ಪರಿವಾರ = ಹಿಂಬಾಲಿಗರು, ಸೇವಕರು
ಪ್ರದಕ್ಷಿಣೆ = ಸುತ್ತುವರಿಯುವದು
ಪ್ರಮುಖ ಮುಖ್ಯ
ಪ್ರಾಚೀನ = ಹಳೆಯ, ಪೂರ್ವಕಾಲದ
ಪಿಡುಗು = ಬೇನೆ, ಅಂಟುರೋಗ
ಪಿಸುಣಿಗ = ಚಾಡಿಕೋರ
ಪೀಳಿಗೆ = ಸಂತತಿ, ವಂಶ
ಪೊಡವಿ = ಭೂಮಿ
ಪೊಡವಿಪ = ಅರಸು
ಬಗೆ = ಯೋಚಿಸು, ರೀತಿ
ಬಡಿವಾರ = ಬಾಯಿಜಂಬ, ಡೌಲು, ಬಡಾಯಿ
ಬಂಧುತ್ವ = ಸೋದರಭಾವ

ಬಳಲಿಕೆ = ಆಯಾಸ, ದಣಿವು
ಬ್ಳಳ್ಳ = ಅಳತೆಯ ಸೇರು
ಬಿಂಕ = ಗರ್ವ, ಜಂಬ, ಹೆಮ್ಮೆ
ಬೆಂಬತ್ತು = ಬೆನ್ನಟ್ಟು, ಹಿಂಬಾಲಿಸು
ಬೈರಾಗಿ = ಸಂನ್ಯಾಸಿ
ಭಕ್ತವತ್ಸಲ = ಭಕ್ತರನ್ನು ಪ್ರೀತಿಸುವವ
ಭವಣೆ = ಕಷ್ಟ, ತೊಂದರೆ
ಭಯಂಕರ = ಅಂಜಿಸುವಂಥ
ಭಾಗ್ಯ = ಪುಣ್ಯ
ಭಾನು = ಸೂರ್ಯ, ರವಿ
ಮಡದಿ = ಹೆಂಡತಿ
ಮನಗಾಣು = ತಿಳಿ
ಮಣ್ಣುಪಾಲಾಗು = ನಾಶವಾಗು, ಕೆಡು
ಮಾಡು = ಮಾಡ, ಗೂಡು
ಮಾತೆ = ತಾಯಿ
ಮಾರ್ಪು = ವಿನಿಮಯ, ಅದಲು ಬದಲು
ಮಿಗಿಲು = ಅಧಿಕ, ಹೆಚ್ಚು
ಮೆರೆ = ಶೋಭಿಸು
ಮೇಜವಾನಿ = ಆತಿಥ್ಯ, ಉಪಚಾರ, ಸವಿಯೂಟ
ಮೇಲಾಟ = ಏರಾಟ, ಸ್ಪರ್ಧೆ
ಮೇಲ್ಪಂಕ್ತಿ = ಶ್ರೇಷ್ಠ, ಮಾದರಿ
ಮೊಟ್ಟೆ = ಗಂಟು, ತತ್ತಿ
ಯುಕ್ತಿ = ಉಪಾಯ, ಹಂಚಿಕೆ
ರಣ = ಯುದ್ಧ
ರಾಜಧಾನಿ = ರಾಜ್ಯದ ಮುಖ್ಯಪಟ್ಟಣ
ರಾಯತನ = ಒಡೆತನ, ಅರಸೊತ್ತಿಗೆ
ರೆಂಬೆ = ಕೊಂಬೆ, ಟೊಂಗೆ
ವಧೆ = ಕೊಲೆ
ವರಕವಿ = ಶ್ರೇಷ್ಠಕವಿ, ಹುಟ್ಟುಕವಿ
ವಾಣಿ = ಸರಸ್ವತಿ, ನುಡಿ
ವಾಯು = ಗಾಳಿ
ವಿಘ್ನ = ಸಂಕಟ
ವಿಯೋಗ = ಅಗಲುವಿಕೆ
ಶತಮಾನ = ನೂರು ವರ್ಷಗಳ ಕಾಲ
ಶಬರ = ಬೇಡ
ಶಸ್ತ್ರ = ಆಯುಧ
ಶಿಲಾಶಾಸನ = ಶಿಲಾಲಿಪಿ
ಶಿಲ್ಪಕಲೆ = ಕಲ್ಲಿನಲ್ಲಿ ಚಿತ್ರ ಕೆತ್ತುವ ಕಲೆ
ಶೋಧಿಸು = ಹುಡುಕು, ಗೊತ್ತುಹಚ್ಚು
ಸಗ್ಗ = ಸ್ವರ್ಗ
ಸದ್ಗತಿ = ಒಳ್ಳೆಯಗತಿ, ಮೋಕ್ಷ
ಸನಿಹ = ಸಮೀಪ
ಸಲೆ = ಚೆನಾಗಿ
ಸಂಭ್ರಮ = ಸಡಗರ
ಸಹವಾಸ = ಒಡನಾಟ, ಗೆಳೆತನ
ಸಂಹರಿಸು = ನಾಶಮಾಡು, ಕತ್ತರಿಸು
ಸಂಸ್ಕೃತಿ = ಸುಧಾರಣೆ, ತಿದ್ದಿದ ನಡವಳಿ
ಸಾರಿಗೆ = ಸಾಗಿಸುವಿಕೆ
ಸ್ಥಿತಿ = ಅವಸ್ಥೆ, ಗತಿ
ಸೂಕ್ಷ್ಮ = ತೀರ ಸಣ್ಣ
ಸೃಷ್ಟಿ = ಜಗತ್ತು
ಸೊಲ್ಲು = ಮಾತು
ಸೈ = ಸರಿ, ಹೌದು
ಸ್ಮರಣೆ = ನೆನಪು, ಧ್ಯಾನ
ಹವಣಿಸು = ಎಣಿಕೆಹಾಕು
ಹಳಿ = ನಿಂದಿಸು
ಹೀನರು = ಕೆಟ್ಟಜನರು
ಹೋರಿ – ಉದ್ಯೋಗ
ಹೌಹಾರು – ಎಚ್ಚರದಪ್ಪು

೭ ೬೨೨೮

